KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಏಪ್ರಿಲ್ ೨೪, ೨೦೦೮ (ವೈಶಾಖ ೪, ಶಕ ವರ್ಷ ೧೯೩೦) | ಸಂಚಿಕೆ ೧೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಶ್ರೀ ಕುಮಾರ್, ಚಾಲಕ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ವಾಹನ ಚಾಲಕರಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸುವ ಕುರಿತು.

**ಓದಲಾಗಿದೆ :** ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಪತ್ರ ಸಂಖ್ಯೆ: ಕಅಪ್ರಾ/ಕಾ/50/06–07, ದಿನಾಂಕ 19–2–2007.

**ಪ್ರಸ್ತಾವನೆ :**

ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ ಓದಲಾದ ದಿನಾಂಕ 19–2–2007ರ ಪತ್ರದಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಬೆಂಗಳೂರು (ಗ್ರಾಮಾಂತರ) ಇಲ್ಲಿ ಚಾಲಕರಾಗಿ ಶ್ರೀ ಕುಮಾರ್ ಅವರನ್ನು ಪ್ರಾಧಿಕಾರದ ಕಾರ್ಯದರ್ಶಿಗಳ ಕಛೇರಿಯಲ್ಲಿ ಖಾಲಿ ಇರುವ ವಾಹನ ಚಾಲಕರ ಹುದ್ದೆಯಲ್ಲಿ ತೆಗೆದುಕೊಳ್ಳಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 25 ಕೆಓಎಲ್ 2007, ಬೆಂಗಳೂರು, ದಿನಾಂಕ: 24ನೇ ಡಿಸೆಂಬರ್ 2007**

ಶ್ರೀ ಕುಮಾರ್, ಚಾಲಕರು, (ಬಿಲ್ಲೆ ಸಂಖ್ಯೆ: 1505) ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಹಾರೋಹಳ್ಳಿ ಘಟಕ, ಬೆಂಗಳೂರು (ಗ್ರಾಮಾಂತರ) ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಅವರ ಕಛೇರಿಯಲ್ಲಿ ಖಾಲಿ ಇರುವ ಚಾಲಕರ ಹುದ್ದೆಗೆ ಈ ಆದೇಶದೊಡನೆ ಲಗತ್ತಿಸಿರುವ ಷರತ್ತು ಮತ್ತು ನಿಬಂಧನೆಗೆ ಒಳಪಟ್ಟಂತೆ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಆರ್ಥಿಕ ಇಲಾಖೆಯ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 2183 ವೆಚ್ಚ–5/2007, ದಿನಾಂಕ 21–11–2007ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**Annexu to Government Order No. KCIT 25 KOL 2007 dated: 24th December 2007**

**TERMS AND CONDITIONS IN RESPECT OF OFFICIALS OF NON-GOVERNEMNT ORGANIZATIONS APPOINTED ON CONTRACT BASIS TO THE POSTS UNDER STATE GOVERNMENT**

1. **PERIOD:** The period of contract of Shri Kumar, Driver, Karnataka State Road Transport Corporation is for the period of one year or the service of Shri Kumar, Driver are required in the said office, whichever is earlier.

2. **COMMENCEMENT AND END OF CONTRACT:** The contract shall commence on the date on which the official takes charge of the post under the Government and ends on the date on which the hands over charge of the post under the Government.
3. **PAY AND OTHER ALLOWANCES:** During the period of contract, Shri Kumar, Driver shall be entitled to pay including DA/HRA/CCA admissible to him in his parent organization. He shall be entitled to special pay admissible to the post in Kannada Development Authority. However he shall not be entitled to any other deputation or foreign service allowance. He will also not be eligible for special allowances like lunch allowance/ overtime allowance/ bonus/ ex-gratia etc. attached to the post or attached to the parent organization.
4. **LEAVE RULES:** He will be governed by the leave rules applicable to him in him parent organization.
5. **LEAVE SALARY CONTRIBUTION:** The Government shall pay Leave Salary Contribution at the rate of 12.5% of pay.
6. **P.F. CONTRIBUTIONS:** 12% of the basic pay plus DA shall be deducted from salary of the employees everymonth and remitted to Karnataka State Road Transport Corporation together with employer's contribution at 12% of basic pay plus DA.
7. **GRATUTTY FUND CONTRIBUTION:** Government shall pay contribution towards service gratuity at the rate of 1/12th of pay for every month on contract.
8. **MEDICAL CONCESSION:** The official shall be entitled to the medical attendance as per the Karnataka Government Servants (Medical Attendance) Rules 1963.
9. He shall perform the functions of Driver and attend to all work entrusted to him from time to time by the said Kannada Development Authority.
10. He shall perform his duties diligently and he shall maintain strict secrecy in respect of official information which he comes to know in the course of his duties.
11. He shall be liable to reimburse to Government all the losses which the Government may sustain due to misconduct of any sort on his part.

**M.S. SHIVARAM**
PR. 10 Under Secretary to Government,
Kannada and Culture, Information and Tourisum Department.

**FINANCE SECRETARIAT**

**Sub :** General Delegation of Common Financial powers to the Heads of Departments and others – Notifying the Commissioner, Information Department as Head of the Department instead of Director, Information Department – Amendment Regarding.

**Read :**
1. Govt. Order No. FD 2 TFP 98, dtd: 17-5-1999.
2. Govt. Order No. VAPRAYU 168 VAPRASI 2005, dtd: 8-10-2007.

**Preamble:**

In the Government Order read at (1) above sanction has been accorded to notify the officers of Government Departments as in annexure to the said order who would exercise the Common Financial Powers delegated by Government Order No. FD 7 TFP 91, dated: 16-9-1991 at the Head of Department/ Divisional/ District/ Sub-Divisional/ Taluk levels of their respective Departments. The Kannada & Culture, Information and Tourist Dept. vide Govt. Order read at (2) above, has declared the Commissioner, Information Department as Head of the Department instead of Director, Information Department under Rule 8(21) of KCSRs. in the interest of Administration and for speedy implementation of different schemes of Govt. In view of this, an amendment has to be issued to annexure to Government Order No. FD 2 TFP 98, dated: 17-5-1999 to replace the Commissioner, Information Department in place of Director of Information & Publicity in Heads of the Department column to enable the Commissioner, Information Department to exercise the common financial powers delegated to Heads of Departments and hence this order.

**Government Order No. FD 3 TFP 2004, Bangalore, Dated 18th December 2007**

Government is pleased to notify the Commissioner, Information Department as the 'Head of the Department' instead of Director, Information & Publicity in partial modification of column-2 under ITY Department in annexure to Govt. order No. FD 2 TFP 98, dated: 17-5-1999.

2. This order is only for exercise of financial/ Administrative Powers and does not bestow any equality of administrative Status of officers among different departments.

3. If any post is abolished/upgrade/down graded the department should immediately inform Finance Department for suitable amendment.

By order and in the name of the President of India,

PR. 7

**C. SHAMARAO**

Under Secretary to Government,
(FR & BCC) Finance Department.

**ಸಹಕಾರ ಸಚಿವಾಲಯ**

**ಸಂಖ್ಯೆ: ಸಇ 96 ಮಾಇಸೇ 2007, ಬೆಂಗಳೂರು, ದಿನಾಂಕ 14ನೇ ಡಿಸೆಂಬರ್ 2007**

**ತಿದ್ದುಪಡಿ**

ಸರ್ಕಾರದ ಆದೇಶ ಸಂಖ್ಯೆ: ಸಇ/96/ಮಾಇಸೇ/2007, ದಿನಾಂಕ 18–10–2007ರ ಆದೇಶ ಭಾಗದಲ್ಲಿ "ದಿನಾಂಕ 15–4–2007 ರಿಂದ 14–3–2008" ಎಂದು ಇರುವುದನ್ನು "ದಿನಾಂಕ 15–4–2007 ರಿಂದ 14–4–2008" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 9

**ಸಿ.ಕೆ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಜೆ.ಆರ್. ರೂಗಿ, ಭೂದಾಖಲೆಗಳ ಉಪ ನಿರ್ದೇಶಕರು, ಬಿಜಾಪುರ ಇವರ ವಿರುದ್ಧ ಇಲಾಖಾ ವಿಚಾರಣೆ – ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**

1. ನೋಟೀಸ್ ಸಂ.ಕಂಇ 36 ವಿಕೋವಿ 2005, ದಿ: 24–8–2006.
2. ಶ್ರೀ ಜೆ.ಆರ್. ರೂಗಿ, ಭೂ.ಉ.ನಿ. ಅವರ ದಿ: 22–9–2006ರ ಲಿಖಿತ ಹೇಳಿಕೆ.
3. ಸರ್ಕಾರಿ ಆದೇಶ ಸಂ. ಕಂಇ 19 ಭೂದಾಸೇ (1) 2007, ದಿ: 24–5–2007.
4. ಅಧಿಸೂಚನೆ ಸಂ. ಕಂಇ 19 ಭೂದಾಸೇ (1) 2007, ದಿ: 26–6–2007.
5. ಸರ್ಕಾರಿ ಆದೇಶ ಸಂ. ಕಂಇ 19 ಭೂದಾಸೇ (1) 2007, ದಿ: 2–7–2007.
6. ನಿರ್ದೇಶಕರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳು ಇವರ ಪತ್ರ ಸಂ. ಸಿಬ್ಬಂದಿ. ಶಿಸ್ತು.2/2007–08, ದಿ: 18–7–2007.

**ಪ್ರಸ್ತಾವನೆ :**

ಶ್ರೀ ಜೆ.ಆರ್. ರೂಗಿ, ಭೂದಾಖಲೆಗಳ ಉಪ ನಿರ್ದೇಶಕರು, ಭೂಮಾಪನ ಇಲಾಖೆ, ಬಿಜಾಪುರ ರವರು ಭೂದಾಖಲೆಗಳ ಸಹಾಯಕ ನಿರ್ದೇಶಕರು, ಚಿಕ್ಕೋಡಿ ಉಪ ವಿಭಾಗ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಇವರು ಆಸ್ತಿಯ ಪಾಲುಗಾರಿಕೆ ಸಂಬಂಧ ಅಥಣಿ ನ್ಯಾಯಾಲಯದಲ್ಲಿ ಅಸಲು ದಾವೆ ಸಂ: 11/03, 108/04 ಪ್ರಕರಣಗಳು ನ್ಯಾಯಾಲಯದಲ್ಲಿ ಇರುವಾಗ ಅಥಣಿ ನಗರದ ನಗರ ಮಾಪನ ವ್ಯಾಪ್ತಿಯ ಸಿಟಿ ಸ.ನಂ. 1040, 2573, 2575, 2577, 2579, 3408ರ ಬಗ್ಗೆ ಕಾನೂನು ಬಾಹಿರವಾಗಿ ಕ್ರಮ ಎಸಗಿ ಕರ್ತವ್ಯ ಲೋಪ ಮತ್ತು ನಡತೆ ನಿಯಮಗಳ ಉಲ್ಲಂಘನೆ ಮಾಡಿರುವ ಆರೋಪಗಳಿಗಾಗಿ ಶ್ರೀ ಜೆ.ಆರ್. ರೂಗಿ ರವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 24–8–2006ರ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸಿಗೆ ಶ್ರೀಯುತರು ಮೇಲೆ (2)ರಲ್ಲಿ ಓದಲಾದ ದಿ: 22–9–2006ರ ಲಿಖಿತ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿಯು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ.

ಈ ಬಗ್ಗೆ ಮೇಲಿನ ಕಂಡಿಕೆ (3)ರಲ್ಲಿನ ದಿ: 24–5–2007ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಶಿಸ್ತು ಕ್ರಮವನ್ನು ಕಾಯ್ದಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಹಾಗೂ ಮೇಲೆ (4)ರಲ್ಲಿ ಓದಲಾದ ದಿ: 26–6–2007ರ ಅಧಿಸೂಚನೆಯಲ್ಲಿ ಶ್ರೀ ಜೆ.ಆರ್. ರೂಗಿ ರವರ ಅಮಾನತ್ತನ್ನು ರದ್ದುಪಡಿಸಿ ಉಪ ನಿರ್ದೇಶಕರು ಹಾಗೂ ತಾಂತ್ರಿಕ ಸಹಾಯಕರು, ಬಿಜಾಪುರ ಇಲ್ಲಿಗೆ ಮರುನಿಯುಕ್ತಿಗೊಳಿಸಿದೆ.

ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಮೇಲೆ (5)ರಲ್ಲಿ ಓದಲಾದ ದಿನಾಂಕ 2–7–2007ರ ಆದೇಶದಲ್ಲಿ ಶ್ರೀ ಬಿ. ವಿಶ್ವನಾಥ್, ಭೂದಾಖಲೆಗಳ ಜಂಟಿ ನಿರ್ದೇಶಕರವರನ್ನು ವಿಚಾರಣಾಧಿಕಾರಿಗಳಾಗಿ ಹಾಗೂ ಶ್ರೀ ಮುದ್ದುರಂಗಪ್ಪ, ಭೂದಾಖಲೆಗಳ ಜಂಟಿ ನಿರ್ದೇಶಕರು, (ವಿಚಾರಣೆ ಮತ್ತು ತನಿಖೆ) ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ.

ಶ್ರೀ ಬಿ. ವಿಶ್ವನಾಥ್ ರವರು ಹೃದಯ ಶಸ್ತ್ರ ಚಿಕಿತ್ಸೆಗೆ ಒಳಗಾಗಿರುವುದರಿಂದ ಪ್ರಸ್ತುತ ಪ್ರಕರಣದ ವಿಚಾರಣಾಧಿಕಾರಿಗಳಾಗಿ ಶ್ರೀ ಮುದ್ದುರಂಗಪ್ಪ, ಜಂಟಿ ನಿರ್ದೇಶಕರು (ವಿಚಾರಣೆ ಮತ್ತು ತನಿಖೆ) ಹಾಗೂ ಮಂಡನಾಧಿಕಾರಿಗಳಾಗಿ ಶ್ರೀ ಅಜ್ಜಪ್ಪ, ವಿಚಾರಣಾಧಿಕಾರಿಗಳು, ನಗರಮಾಪನ, ತಂಡ–3, ಬೆಂಗಳೂರು ರವರನ್ನು ನೇಮಕ ಮಾಡಲು ಸರ್ಕಾರವು ಉದ್ದೇಶಿಸಿದೆ. ಅದರಂತೆ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 19 ಭೂದಾಸೇ (1) 2007, ಬೆಂಗಳೂರು, ದಿನಾಂಕ: 7ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಮುದ್ದುರಂಗಪ್ಪ, ಭೂದಾಖಲೆಗಳ ಜಂಟಿ ನಿರ್ದೇಶಕರು (ವಿಚಾರಣೆ ಮತ್ತು ತನಿಖೆ) ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಹಾಗೂ ಶ್ರೀ ಅಜ್ಜಪ್ಪ, ವಿಚಾರಣಾಧಿಕಾರಿಗಳು, ನಗರಮಾಪನ, ತಂಡ–3, ಬೆಂಗಳೂರು ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸುತ್ತದೆ. ಈ ಬಗ್ಗೆ ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 18

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ)

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ :** ರಾಜ್ಯ ಸರ್ಕಾರವು ಕರ್ನಾಟಕ ರಾಜ್ಯ ಮಹಿಳಾ ಆಯೋಗಕ್ಕೆ ಅಧ್ಯಕ್ಷರು ಮತ್ತು ಸದಸ್ಯರನ್ನು ನೇಮಿಸಲು ಅರ್ಹ ವ್ಯಕ್ತಿಗಳ ಪಟ್ಟಿಯನ್ನು ತಯಾರಿಸಲು ಸಮಿತಿ ರಚಿಸುವ ಕುರಿತು.

**ಓದಲಾಗಿದೆ :** ಅಧಿಸೂಚನೆ ಸಂಖ್ಯೆ: ಮಮಅ 4 ರಾಮಅ 2007, ದಿ: 2–11–2007.

**ಪ್ರಸ್ತಾವನೆ :**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಡಾ: ಶಾಲಿನಿ ರಜನೀಶ, ಸರ್ಕಾರದ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರನ್ನು ಕರ್ನಾಟಕ ರಾಜ್ಯ ಮಹಿಳಾ ಆಯೋಗದ ಅಧ್ಯಕ್ಷರನ್ನಾಗಿ ಸಹ ನೇಮಿಸಲಾಗಿರುತ್ತದೆ.

ಕರ್ನಾಟಕ ರಾಜ್ಯ ಮಹಿಳಾ ಆಯೋಗ ಅಧಿನಿಯಮ, 1995ರ ಪ್ರಕರಣ 3(2)ರನ್ವಯ ಕರ್ನಾಟಕ ರಾಜ್ಯ ಮಹಿಳಾ ಆಯೋಗಕ್ಕೆ ಮಹಿಳಾ ಅಧ್ಯಕ್ಷರನ್ನು ಮತ್ತು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಕ್ಕೆ ಸೇರಿದವರನ್ನು ಒಳಗೊಂಡಂತೆ 6 ಮಹಿಳಾ ಸದಸ್ಯರನ್ನು ರಾಜ್ಯ ಸರ್ಕಾರವು ನೇಮಿಸಬೇಕಾಗಿದೆ.

ರಾಜ್ಯ ಸರ್ಕಾರವು ನೇಮಿಸುವ ಅಧ್ಯಕ್ಷರು ಮಹಿಳೆಯರ ಮಹಿಳಾ ಹಿತರಕ್ಷಣೆಗಾಗಿ ತೊಡಗಿಸಿಕೊಂಡಿರಬೇಕು. ಸಾಮರ್ಥ್ಯ, ಪ್ರಾಮಾಣಿಕ ಮತ್ತು ಗಣ್ಯವ್ಯಕ್ತಿಯಾಗಿ ಈ ಕೆಳಗೆ ಸೂಚಿಸಿರುವ ಕ್ಷೇತ್ರದಲ್ಲಿ ಅನುಭವವುಳ್ಳವರನ್ನು ಆಯೋಗದ ಸದಸ್ಯರನ್ನಾಗಿ ನೇಮಿಸಬಹುದಾಗಿದೆ:

1. ಕಾನೂನು ಮತ್ತು ಶಾಸನ ರಚನೆ,
2. ಕಾರ್ಮಿಕ ಸಂಘವಾದ,
3. ಮಹಿಳೆಯರ ಉದ್ಯೋಗ ಸಾಮರ್ಥ್ಯವನ್ನು ಹೆಚ್ಚಿಸುವುದಕ್ಕೆ ಇರುವಂತೆ ಕೈಗಾರಿಕೆ ಅಥವಾ ಸಂಸ್ಥೆಯ ನಿರ್ವಹಣೆ,
4. ಮಹಿಳಾ ಕಾರ್ಯಕರ್ತರು ಸೇರಿದಂತೆ ಮಹಿಳಾ ಸ್ವಯಂ ಸೇವಾ ಸಂಸ್ಥೆಗಳ ಆಡಳಿತ, ಆರ್ಥಿಕ ಅಭಿವೃದ್ಧಿ, ಆರೋಗ್ಯ, ಶಿಕ್ಷಣ ಅಥವಾ ಸಮಾಜ ಕಲ್ಯಾಣ.

ಪ್ರಕರಣ 4(1)ರನ್ವಯ ಸರ್ಕಾರದ ವಿವೇಚನೆಗೊಳಪಟ್ಟು ಅಧ್ಯಕ್ಷರು ಮತ್ತು ಸದಸ್ಯರು ಮೂರು ವರ್ಷಗಳಿಗಿಂತ ಹೆಚ್ಚಿಲ್ಲದಂತೆ ತಮ್ಮ ಸ್ಥಾನದಲ್ಲಿ ಇರಬಹುದಾಗಿರುತ್ತದೆ. ರಾಜ್ಯ ಸರ್ಕಾರ ನಿಗಧಿಪಡಿಸುವ ವೇತನ ಮತ್ತು ಭತ್ಯೆಯನ್ನು ಪಡೆಯಲು ಅರ್ಹರಿರುತ್ತಾರೆ.

ಸರ್ಕಾರೇತರ ವ್ಯಕ್ತಿಗಳನ್ನು ಅಧ್ಯಕ್ಷರನ್ನಾಗಿ ಹಾಗೂ ಸದಸ್ಯರನ್ನಾಗಿ ನೇಮಿಸುವುದನ್ನು ಪರಿಶೀಲಿಸಲಾಗುತ್ತಿದ್ದು, ಸೂಕ್ತ ಮತ್ತು ಅರ್ಹ ವ್ಯಕ್ತಿಗಳನ್ನು ನೇಮಿಸುವ ನಿಮಿತ್ತ, ಅಂತಹ ವ್ಯಕ್ತಿಗಳ ಪಟ್ಟಿಯನ್ನು ತಯಾರಿಸಲು ಒಂದು ಸಮಿತಿ ರಚಿಸುವ ಕುರಿತು ಪರಿಶೀಲಿಸಿದ್ದು, ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 4 ರಾಮಅ 2007, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2007**

ಕರ್ನಾಟಕ ರಾಜ್ಯ ಮಹಿಳಾ ಆಯೋಗ ಅಧಿನಿಯಮ, 1995ರ ಪ್ರಕರಣ 3(2)ರನ್ವಯ ಕರ್ನಾಟಕ ರಾಜ್ಯ ಮಹಿಳಾ ಆಯೋಗದ ಅಧ್ಯಕ್ಷರನ್ನು ಮತ್ತು ಸದಸ್ಯರನ್ನು ಆಯ್ಕೆ ಮಾಡಲು ಈ ಕೆಳಗೆ ಸೂಚಿಸಿದ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಪಿ.ಕೆ.ಹೆಚ್. ತಾರಕನ್,<br>ರಾಜ್ಯಪಾಲರ ಸಲಹೆಗಾರರು | ಅಧ್ಯಕ್ಷರು |

| | | |
|---|---|---|
| 2 | ಸರ್ಕಾರದ ಕಾರ್ಯದರ್ಶಿ,<br>ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| 3 | ನಿರ್ದೇಶಕರು,<br>ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ | ಸದಸ್ಯರು |
| 4 | ಕಾರ್ಯದರ್ಶಿ,<br>ಕರ್ನಾಟಕ ರಾಜ್ಯ ಮಹಿಳಾ ಆಯೋಗ | ಸಂಚಾಲಕರು |

ಅಧ್ಯಕ್ಷರು ಮತ್ತು ಸದಸ್ಯರನ್ನು ಆಯ್ಕೆ ಮಾಡಲು ಸಮಿತಿಯ ಮಾನದಂಡಗಳನ್ನು ರೂಪಿಸತಕ್ಕದ್ದು.

ಕಾರ್ಯದರ್ಶಿ, ಕರ್ನಾಟಕ ರಾಜ್ಯ ಮಹಿಳಾ ಆಯೋಗ ಇವರು ಅಧ್ಯಕ್ಷರು ಮತ್ತು ಸದಸ್ಯರುಗಳನ್ನು ಆಯ್ಕೆ ಮಾಡಲು ಅರ್ಹವ್ಯಕ್ತಿಗಳಿಂದ ಅರ್ಜಿಯನ್ನು ಆಹ್ವಾನಿಸಿ ಪ್ರಕಟಿಸಿ ಹೊರಡಿಸತಕ್ಕದ್ದು.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 19

**ವಿ. ಶಿವಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ ಗೋಕಾಕ್ ತಾಲ್ಲೂಕಿನ ಕೊಣ್ಣೂರು ಪಟ್ಟಣದಲ್ಲಿ ಮೇಲ್ಮಟ್ಟ ಜಲಸಂಗ್ರಹಾಗಾರ ನಿರ್ಮಾಣ ಮತ್ತು ವಿತರಣಾ ಜಾಲವನ್ನು ನವೀಕರಿಸುವ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: ಕಜಮಂ/ ಮುಅ(ಉ)/ಉಮುಅ–1/ತಾಸ–4/ಸಅ–2/ಬೆಳಗಾವಿ/07–08/1661/ ದಿ: 11–9–2007.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು, ಬೆಳಗಾಂ ಜಿಲ್ಲೆ ಗೋಕಾಕ್ ತಾಲ್ಲೂಕಿನ ಕೊಣ್ಣೂರು ಪಟ್ಟದಲ್ಲಿ ಮೇಲ್ಮಟ್ಟ ಜಲಸಂಗ್ರಹಾಗಾರ ನಿರ್ಮಾಣ ಮತ್ತು ವಿತರಣಾ ಜಾಲವನ್ನು ನವೀಕರಿಸುವ ಕಾಮಗಾರಿಗಳಿಗೆ ರೂ. 150.00 ಲಕ್ಷಗಳ ಅಂದಾಜು ಪಟ್ಟಿಯನ್ನು ತಯಾರಿಸಿ, ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಕೋರಿರುತ್ತಾರೆ.

ಕೊಣ್ಣೂರು ಪಟ್ಟಣಕ್ಕೆ ಸುಧಾರಿತ ನೀರು ಸರಬರಾಜು ಯೋಜನೆಯನ್ನು ಘಟಪ್ರಭಾ ನದಿಯನ್ನು ಮೂಲವಾಗಿಟ್ಟುಕೊಂಡು ರೂ. 129.82 ಲಕ್ಷಗಳ ಅಂದಾಜು ಮೊತ್ತದಲ್ಲಿ ನವೆಂಬರ್–2001ರಲ್ಲಿ ಚಾಲನೆಗೊಳಿಸಲಾಗಿರುತ್ತದೆ ಮತ್ತು ಪ್ರಸ್ತುತ ಈ ಯೋಜನೆಯಿಂದ ತಲಾ ದಿನಂಪ್ರತಿ 115 ಲೀಟರ್‌ನಂತೆ ಪಟ್ಟಣಕ್ಕೆ ನೀರು ಸರಬರಾಜು ಮಾಡಲಾಗುತ್ತಿದೆ. ಹಾಲಿ ಇರುವ ವಿತರಣಾ ಮಾರ್ಗ 1975ಕ್ಕಿಂತ ಮೊದಲು ಅಳವಡಿಸಿದ್ದು ಶಿಥಿಲಗೊಂಡು ಸೋರಿಕೆಯಾಗುತ್ತಿದ್ದ ಹಾಗೂ ಹೊಸ ಬಡಾವಣೆಗಳಿಗೆ ವ್ಯವಸ್ಥಿತವಾದ ವಿತರಣಾ ಜಾಲ ಇರುವುದಿಲ್ಲ.

ಈ ಪಟ್ಟಣದ ಜನಸಂಖ್ಯೆಯು 2001ರ ಜನಗಣತಿಯಂತೆ 17978 ಇದ್ದು, ಪ್ರಸ್ತುತ 20,000 ಇರುತ್ತದೆ. 2016ನೇ ಇಸವಿಗೆ 24,600 ಆಗಬಹುದೆಂದು ಅಂದಾಜಿಸಲಾಗಿದೆ. ಜನಸಂಖ್ಯೆಗೆ ಅನುಗುಣವಾಗಿ ಪ್ರಸ್ತುತ 10.00 ಲಕ್ಷ ಲೀ. ಸಾಮರ್ಥ್ಯದ ಮೇಲ್ಮಟ್ಟ ಜಲಸಂಗ್ರಹಾಗಾರದ ಜೊತೆಗೆ 5 ಲಕ್ಷ ಲೀಟರ್ ಸಾಮರ್ಥ್ಯದ ಮತ್ತೊಂದು ಜಲಸಂಗ್ರಹಾಗಾರ ನಿರ್ಮಿಸುವುದು ಮತ್ತು ತಲಾ ದಿನಂಪ್ರತಿ 135 ಲೀ. ನೀರು ಸರಬರಾಜು ಮಾಡಲು ಕೊಳವೆ ಮಾರ್ಗ ಅಳವಡಿಸಲು ಉದ್ದೇಶಿಸಲಾಗಿದೆ. ಈ ಯೋಜನೆಗೆ ಮಂಡಳಿಯ ಅನುಮೋದಿತ 2007–08ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ರೂ. 50.00 ಲಕ್ಷಗಳನ್ನು ಕೊಳವೆ ನೀರು ಸರಬರಾಜು ಯೋಜನೆಯಡಿ ಅನುವು ಮಾಡಲಾಗಿದೆ.

ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 50 ಯುಡಬ್ಲ್ಯೂಎಸ್ 2007, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೊಣ್ಣೂರು ಪಟ್ಟಣದಲ್ಲಿ ಮೇಲ್ಮಟ್ಟ ಜಲಂಗ್ರಹಾಗಾರ ನಿರ್ಮಾಣ ಮತ್ತು ವಿತರಣಾ ಜಾಲವನ್ನು ನವೀಕರಿಸುವ ಕಾಮಗಾರಿಗಳನ್ನು ರೂ. 150.00 ಲಕ್ಷಗಳ (ನೂರ ಐವತ್ತು ಲಕ್ಷ ರೂ.ಗಳ) ಅಂದಾಜು ವೆಚ್ಚದಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೊಳವೆ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ.

1. ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.

2. ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.
3. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡಕೂಡದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ 20–1–2003ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಭಾರತ ರಾಷ್ಟ್ರಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 20

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಗಣಿ ಮತ್ತು ಭೂವಿಜ್ಞಾನ ಇಲಾಖೆ ಅಂತರ್ಜಲ ವಿಭಾಗದ ಡ್ರಿಲ್ಲಿಂಗ್ ವಿಭಾಗದಲ್ಲಿ ನೀರು ಇಳುವರಿ ಪರೀಕ್ಷೆ ಸ್ವಚ್ಚತೆ ಮತ್ತು ಕೊಳವೆ ಬಾವಿಯಲ್ಲಿ ಸಿಕ್ಕಿಕೊಂಡ ಪಂಪ್ ಹೊರ ತೆಗೆಯುವ ಸೇವೆಗಳ ದರಗಳನ್ನು ಪರಿಷ್ಕರಣೆ ಮಾಡುವ ಬಗ್ಗೆ – ಆದೇಶ.

**ಸರ್ಕಾರದ ಆದೇಶ ಸಂಖೆ ಸನೀಇ 11 ಅಜಅ 05 ಬೆಂಗಳೂರು, ದಿನಾಂಕ 19ನೇ ಡಿಸೆಂಬರ್ 2007**

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಸಿಐ/15/ಎಂಜಿಪಿ/89, ದಿ: 26–3–1990.
2. ದಿನಾಂಕ 16–1–2006ರಂದು ಕೊನೆಗೊಂಡ ಪತ್ರ ಸಂಖ್ಯೆ ಗಭೂಇ/ಅಜವಿ/ ದರ ಪರಿಷ್ಕರಣೆ/ 2005–06/ 3487.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 26–3–90ರ ಆದೇಶದಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಅಂತರ್ಜಲ ವಿಭಾಗದಲಿ ನೀರು ಇಳುವರಿ ಪರೀಕ್ಷೆ, ಸ್ವಚ್ಚತೆ ಮತ್ತು ಕೊಳವೆ ಬಾವಿಯಲ್ಲಿ ಸಿಕ್ಕಿಕೊಂಡ ಪಂಪ್ ಹೊರ ತೆಗೆಯುವ ಬಗ್ಗೆ ದರ ನಿಗಧಿಪಡಿಸಿ ಆದೇಶ ಹೊರಡಿಸಲಾಗಿದೆ.

ಸದರಿ ದರಗಳನ್ನು ಬಹಳ ವರ್ಷಗಳ ಹಿಂದೆ ನಿಗದಿಪಡಿಸಿದ್ದು ನಂತರದ ದಿನಗಳಲ್ಲಿ ಆಡಳಿತ ವೆಚ್ಚಗಳು, ಸಾಮಗ್ರಿ ಸಾಧನೆಗಳ ವೆಚ್ಚಗಳಲ್ಲಿ ತೀವ್ರ ಹೆಚ್ಚಳವಾಗಿರುವುದರಿಂದ ಮೇಲ್ಕಂಡ ಆದೇಶದಲ್ಲಿ ನಿಗಧಿಪಡಿಸಿರುವ ದರ ಪರಿಷ್ಕರಣೆ ಅಗತ್ಯವಿರುವುದರಿಂದ ದರ ಪರಿಷ್ಕರಣೆಗೆ ಸಂಬಂಧಿಸಿದಂತೆ ಆಯುಕ್ತರು ಹಾಗೂ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪರಿಷ್ಕೃತ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಅಂತರ್ಜಲ ವಿಭಾಗದಿಂದ ನೀಡುತ್ತಿರುವ ವಿವಿಧ ಸಾರ್ವಜನಿಕ ಸೇವೆಗಳಿಗೆ ಸಂಬಂಧಿಸಿದಂತೆ ಅನುಬಂಧ–1ರಲ್ಲಿರುವ ಪಟ್ಟಿಯಲ್ಲಿರುವಂತೆ ಪರಿಷ್ಕೃತ ದರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಗಧಿಪಡಿಸಲು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ/288/ವೆಚ್ಚ–1/2007, ದಿನಾಂಕ: 3–10–2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಸರ್ಕಾರಿ ಆದೇಶ ಸಂ. ಸನೀಇ 11 ಅಜಅ 2005 ಬೆಂಗಳೂರು, ದಿನಾಂಕ 19–12–2007ರ**

**ಅನುಬಂಧ–1**

| ಕ್ರಮ ಸಂಖ್ಯೆ | | ಘಟಕ | ನಿಗಧಿಪಡಿಸಿದ ಪರಿಷ್ಕೃತ ದರ (ರೂಪಾಯಿಗಳಲ್ಲಿ) |
|---|---|---|---|
| 1 | **I. ಸ್ಥಳಾಯ್ಕೆ ಸಮೀಕ್ಷೆ**<br>ಅ) ಭೂ ವೈಜ್ಞಾನಿಕ ವಿಧಾನದಿಂದ ತೆರೆದ ಬಾವಿ/ ಕೊಳವೆ ಬಾವಿಗಾಗಿ ಸ್ಥಳಾಯ್ಕೆ ವ್ಯವಸಾಯಕ್ಕಾಗಿ | ಒಂದು | 200 |

| | | | |
|---|---|---|---|
| 2 | ತೆರೆದ ಬಾವಿ / ಕೊಳವೆ ಬಾವಿಗಾಗಿ ಸ್ಥಳಾಯ್ಕೆ ವ್ಯವಸಾಯೇತರ | ಒಂದು | 200 |
| 3 | ಸ್ಥಳಾಯ್ಕೆ ದೃಢೀಕರಣ ಪತ್ರದ ನವೀಕರಣ | ಒಂದು | 100 |
| 4 | ಅ) ಭೂ ಭೌತ ವಿಧಾನದಿಂದ ತೆರೆದ ಬಾವಿ/ ಕೊಳವೆ ಬಾವಿಗಾಗಿ ಸ್ಥಳಾಯ್ಕೆ ವ್ಯವಸಾಯಕ್ಕಾಗಿ | ಒಂದು | 400 |
| 5 | ತೆರೆದ ಬಾವಿ / ಕೊಳವೆ ಬಾವಿಗಾಗಿ ಸ್ಥಳಾಯ್ಕೆ ವ್ಯವಸಾಯೇತರ | ಒಂದು | 400 |
| 6 | ಸ್ಥಳಾಯ್ಕೆ ದೃಢೀಕರಣ ಪತ್ರದ ನವೀಕರಣ | ಒಂದು | 200 |
| 7 | ಭೂಭೌತ ಸಮೀಕ್ಷಾ ಉಪಕರಣಗಳ ಸಾಗಾಣಿಕೆ ಶುಲ್ಕ (ತಾಲ್ಲೂಕು ಕೇಂದ್ರದಿಂದ ಸ್ಥಳಾಯ್ಕೆ ಸ್ಥಳಕ್ಕೆ ಹೋಗಿ ಬರಲು) | ಪ್ರತಿ ಕಿಲೋ ಮೀಟರ್ ದೂರಕ್ಕೆ | 3,00 |
| 8 | ಸಂಶೋಧನೆ ಆಧಾರಿತ ಕಾರ್ಯಗಳು | ಒಂದು ದಿನಕ್ಕೆ | 1000 |
| 1 | **II. ಕೊರೆಯುವ ವಿಭಾಗ**<br>ಕೊರೆಯುವ ಸಂಸ್ಥೆಗಳ ಅನುಮೋದನೆ<br>ಅ. ಹೊಸದಾಗಿ<br>ಆ. ನವೀಕರಣ | <br><br>ಒಂದು ಯಂತ್ರಕ್ಕೆ<br>ಒಂದು ಯಂತ್ರಕ್ಕೆ | <br><br>1000<br>500 |
| 2 | ಕೊಳವೆ ಬಾವಿ ನೀರು ಇಳುವರಿ ಪರೀಕ್ಷೆ ಮತ್ತು ಸ್ವಚ್ಛತೆ (3 ಘಂಟೆ ಅವಧಿಗೆ 90 ಮೀಟರ್ ಆಳದವರೆಗೆ) | ಒಂದು ಪರೀಕ್ಷೆಗೆ | 600 |
| 3 | ಕೊಳವೆ ಬಾವಿ ನೀರು ಇಳುವರಿ ಪರೀಕ್ಷೆ ಮತ್ತು ಸ್ವಚ್ಛತೆ (90 ಮೀಟರ್‌ನಿಂದ 150 ಮೀಟರ್‌ವರೆಗೆ, ಹೆವಿ ಕಂಪ್ರೆಸ್ಸರಿನಿಂದ) | ಪ್ರತಿ ಘಂಟೆಗೆ | 1000 |
| 4 | ಯಂತ್ರ ಸ್ಥಗಿತಕ್ಕೆ (ಅರ್ಜಿದಾರರ ಸ್ಥಳಕ್ಕೆ ಯಂತ್ರ ಹೋದ ನಂತರ ಅವರ ವೈಯಕ್ತಿಕ ಕಾರಣಗಳಿಂದ ಕೆಲಸ ನಿರ್ವಹಿಸದೆ ವಾಪಸಾದರೆ, ಸಾಗಾಣಿಕೆ ವೆಚ್ಚ ಹೊರತುಪಡಿಸಿ) | ಪ್ರತಿ ದಿನಕ್ಕೆ | 300 |
| 5 | ಕೊಳವೆ ಬಾವಿ ದುರಸ್ತಿ ಕೆಲಸ/ ಪಂಪು ಹೊರ ತೆಗೆಯುವ ಕೆಲಸ (ಮಂದಗತಿ ಯಂತ್ರದಿಂದ 100 ಮೀ. ಆಳದವರೆಗೆ) | ಪ್ರತಿ ದಿನಕ್ಕೆ | 1000 |
| 6 | ಕೊಳವೆ ಬಾವಿ ದುರಸ್ತಿ ಕೆಲಸ/ ಪಂಪು ಹೊರ ತೆಗೆಯುವ ಕೆಲಸ (ಕೇಬಲ್ ಟೂಲ್ ರಿಲ್/ ಪರ್ಕಷನ್ ರಿಗ್ ನಿಂದ 100 ಮೀ. ನಿಂದ 200 ಮೀ.ವರೆಗೆ) | ಪ್ರತಿ ದಿನಕ್ಕೆ | 1500 |
| 7 | ನೀರು ಇಳುವರಿ ಯಂತ್ರ ಸಾಗಾಣಿಕೆ ವೆಚ್ಚ (ತಾಲ್ಲೂಕು ಕೇಂದ್ರದಿಂದ ಅರ್ಜಿದಾರರ ಸ್ಥಳಕ್ಕೆ ಹೋಗಿ ಬರಲು) | ಪ್ರತಿ ಕಿ.ಮೀ. | 8 |
| 1 | **III. ನೀರಿನ ರಾಸಾಯನಿಕ ವಿಶ್ಲೇಷಣೆ**<br>ನೀರಿನ ಪೂರ್ಣ ವಿಶ್ಲೇಷಣೆ<br>ಅ. ಹೊಸದಾಗಿ<br>ಆ. ನವೀಕರಣ | <br><br>15 | <br><br>400 |
| 2 | ಹೆಚ್ಚಿನ ಪ್ರತಿ ಘಟಕ ವಿಶ್ಲೇಷಣೆ | 1 | 75 |
| 3 | ನೀರಿನ ಬ್ಯಾಕ್ಟೀರಿಯಾಲಾಜಿಕಲ್ ವಿಶ್ಲೇಷಣೆ | ಒಂದು ಮಾದರಿಗೆ | 250 |
| 4 | ನೀರಿನ BOD ಮತ್ತು COD ವಿಶ್ಲೇಷಣೆ | ಒಂದು ಮಾದರಿಗೆ | 250 |

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 22

ಸರ್ಕಾರದ ಅಧೀನ ಕಾರ್ಯದರ್ಶಿ,
ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಶಿಕ್ಷಣ ಸಚಿವಾಲಯ**

**ವಿಷಯ :** ಸರ್ಕಾರಿ ಹಾಗೂ ಅನುದಾನಿತ ಸಂಯುಕ್ತ ಪದವಿ ಕಾಲೇಜುಗಳ ವಿಭಜನೆಯ ನಂತರ ಪದವಿ / ಪದವಿ ಪೂರ್ವ ವಿಭಾಗದ ಬೋಧಕ ಹುದ್ದೆಗಳನ್ನು ವಿಭಜನೆ ಮಾಡುವ ಬಗ್ಗೆ.

**ಓದಲಾಗಿದೆ :** ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ದಿನಾಂಕ 7–12–2007ರಂದು ನಡೆದ ಸಭೆ.

**ಪ್ರಸ್ತಾವನೆ :**

ಸರ್ಕಾರಿ ಹಾಗೂ ಅನುದಾನಿತ ಸಂಯುಕ್ತ ಪದವಿ ಕಾಲೇಜುಗಳ ವಿಭಜನೆಯ ನಂತರ ಪದವಿ ಪೂರ್ವ ವಿಭಾಗದ ಬೋಧಕ ಹುದ್ದೆಗಳನ್ನು ವಿಭಜನೆ ಮಾಡುವ ಬಗ್ಗೆ ಮೇಲೆ ಓದಲಾದ ದಿನಾಂಕ 7–12–2007ರ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ರಚಿಸಿ, ಅದರ ವರದಿ ಪಡೆಯುವಂತೆ ನಿರ್ಣಯ ಕೈಗೊಳ್ಳಲಾಗಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 539 ಡಿಪಿಐ 2007, ಬೆಂಗಳೂರು, ದಿನಾಂಕ: 15ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ, ಸರ್ಕಾರಿ ಹಾಗೂ ಅನುದಾನಿತ ಸಂಯುಕ್ತ ಪದವಿ ಕಾಲೇಜುಗಳ ವಿಭಜನೆಯ ನಂತರ ಪದವಿ / ಪದವಿ ಪೂರ್ವ ವಿಭಾಗದ ಅನುದಾನಿತ ಬೋಧಕ ಹುದ್ದೆಗಳನ್ನು ವಿಭಜಿಸುವ ಬಗ್ಗೆ ಈ ಕೆಳಕಂಡ ಅಧಿಕಾರಿಗಳನ್ನು ಒಳಗೊಂಡಂತೆ ಸಮಿತಿಯನ್ನು ರಚಿಸಿದೆ:

| | | |
|---|---|---|
| (i) | ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು | ಅಧ್ಯಕ್ಷರು |
| (ii) | ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |
| (iii) | ನಿರ್ದೇಶಕರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

2. ಸದರಿ ಸಮಿತಿಯ ಕರ್ತವ್ಯಗಳು ಕೆಳಗಿನಂತಿರುತ್ತದೆ.

(ಅ) ಪ್ರತಿಯೊಂದು ಸಂಯುಕ್ತ ಪದವಿ ಕಾಲೇಜಿನಲ್ಲಿ ಅನುದಾನಿತ ಸಂಯೋಜನೆಗಳು, ಅನುದಾನಕ್ಕೆ ಒಳಪಡಿಸಿದ ಹುದ್ದೆಗಳು ಹಾಗೂ ಸಿಬ್ಬಂದಿಗಳನ್ನು ಗುರುತಿಸುವುದು.

(ಆ) ಆಯಾ ಸಂಯುಕ್ತ ಪದವಿ ಕಾಲೇಜಿನಲ್ಲಿ ಪದವಿ / ಪದವಿ ಪೂರ್ವ ವಿಭಾಗಗಳಲ್ಲಿ ಅನುದಾನಿತ ಸಂಯೋಜನೆಗಳು, ಸಿಬ್ಬಂದಿ ಮಾದರಿ ಮತ್ತು ವಿದ್ಯಾರ್ಥಿಗಳ ಸಂಖ್ಯೆಗೆ ಅನುಗುಣವಾಗಿ ಅನುದಾನಿತ ಕಾರ್ಯಭಾರ ನಿಗದಿಪಡಿಸುವುದು.

(ಇ) ಮೇಲಿನಂತೆ ನಿಗದಿಪಡಿಸಿದ ಅನುದಾನಿತ ಕಾರ್ಯಭಾರಕ್ಕೆ ಅನುಗುಣವಾಗಿ ಅನುದಾನಿತ ಹುದ್ದೆಗಳನ್ನು ಪದವಿ ವಿಭಾಗಕ್ಕೂ ಪದವಿ ಪೂರ್ವ ವಿಭಾಗಕ್ಕೂ ವಿಭಜನೆ ಮಾಡಿ ಶಿಫಾರಸ್ಸು ಮಾಡುವುದು.

3. ಸದರಿ ಸಮಿತಿಯು ತನ್ನ ವರದಿಯನ್ನು ಒಂದು ತಿಂಗಳ ಒಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 23

**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು–1,2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಎನ್.ಹೆಚ್. ಸೂಳಬಾವಿ ಮತ್ತು ಶ್ರೀ ಎಸ್. ಕೃಷ್ಣಮೂರ್ತಿ, ಕೆ.ಎ.ಎಸ್. ಅಧಿಕಾರಿಗಳು ಹಿಂದಿನ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ ಹಾಗೂ ಸದರಿ ಕಛೇರಿಯ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಎಸ್.ಪಿ. ವಡ್ಡರ, ಶ್ರೀ ಡಿ.ಜಿ. ದೊಡ್ಡಮನಿ, ಪ್ರಥಮ ದರ್ಜೆ ಕಂದಾಯ ನಿರೀಕ್ಷಕರು ಇವರುಗಳ ವಿರುದ್ಧ ಜಂಟೀ ಇಲಾಖಾ ವಿಚಾರಣೆ – ಮಂಡನಾಧಿಕಾರಿಯವರನ್ನು ಬದಲಾಯಿಸಿ ನೇಮಿಸುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ 6–9–07ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 140 ಎಸ್‌ಇಎನ್ 01
2. ದಿನಾಂಕ 8–10–07ರ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ಸಂಖ್ಯೆ: ಪ್ರಾಆಬೆ/ ಇಎನ್‌ಟಿ/07–08.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎನ್.ಹೆಚ್. ಸೂಳೆಬಾವಿ ಮತ್ತು ಶ್ರೀ ಎಸ್. ಕೃಷ್ಣಮೂರ್ತಿ, ಕೆ.ಎ.ಎಸ್. ಅಧಿಕಾರಿಗಳು, ಇವರು ಈ ಹಿಂದೆ ಕೃಷ್ಣ ಮೇಲ್ದಂಡೆ ಯೋಜನೆ, ಜಮಖಂಡಿ ಇಲ್ಲಿ ವಿಶೇಷ ಭೂ ಸ್ವಾಧೀನಾಧಿಕಾರಿಗಳಾಗಿ ಹಾಗೂ ಸದರಿ ಕಛೇರಿಯ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಎಸ್.ಪಿ. ವಡ್ಡರ, ಶ್ರೀ ಡಿ.ಜಿ. ದೊಡ್ಡಮನಿ, ಪ್ರಥಮ ದರ್ಜೆ ಕಂದಾಯ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರುಗಳು ಮುದ್ರಾಂಕ ಶುಲ್ಕ ವಿನಾಯಿತಿ ಪಡೆಯಲು ಸಂತ್ರಸ್ತರಿಗೆ ನೀಡಲಾದ ಪ್ರಮಾಣ ಪತ್ರಗಳಲ್ಲಿ ಕಟ್ಟಡಗಳ ಮೌಲ್ಯಕ್ಕಿಂತ ಹೆಚ್ಚು ಮೌಲ್ಯ ನಮೂದಿಸಿ ಪ್ರಮಾಣ ಪತ್ರ ನೀಡಿರುವುದರಿಂದ ಸರ್ಕಾರಕ್ಕೆ ರೂ. 6,50,011–00ಗಳ ನಷ್ಟ ಉಂಟಾಗಿರುವ ಆರೋಪದ ಸಂಬಂಧ ಇವರುಗಳ ವಿರುದ್ಧ ಜಂಟೀ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಿ, ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಲು, ಹೆಚ್ಚುವರಿ ಆಯುಕ್ತರು, ಪ್ರಾದೇಶಿಕ ಆಯುಕ್ತರ ಕಛೇರಿ, ಗುಲ್ಬರ್ಗಾರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು

ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬಾಗಲಕೋಟೆ ಇವರನ್ನು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ, ಪ್ರಾದೇಶಿಕ ಆಯುಕ್ತರು, ಬೆಳಗಾಂ ವಿಭಾಗ, ಬೆಳಗಾಂ ಇವರು, ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬಾಗಲಕೋಟೆ ಇವರಿಗೆ ಅವರ ಕೆಲಸ ಕಾರ್ಯಗಳ ಜೊತೆಗೆ ಮತದಾರರ ಭಾವಚಿತ್ರ ತೆಗೆಯುವ ಕಾರ್ಯಕ್ರಮದ ಕೆಲಸ ಕಾರ್ಯಗಳು ಹಾಗೂ ಇನ್ನೂ ಅನೇಕ ಕೆಲಸಗಳ ಹೊರೆ ಇರುವುದರಿಂದ ಮತ್ತು ವಿಚಾರಣಾ ದಿನದಂದು ಹಿಂದಿನ ದಿನವೆ ಬಾಗಲಕೋಟೆಯಿಂದ ಗುಲ್ಬರ್ಗಾಕ್ಕೆ ಪ್ರಯಾಣಿಸಬೇಕಿದ್ದು, ಪ್ರಯಾಣಕ್ಕೆ ಕನಿಷ್ಠ ಐದು ಗಂಟೆಗಳ ಅವಧಿ ಬೇಕಾಗಿದ್ದು, ಇದರಿಂದ ಇವರ ಕೆಲಸ ಕಾರ್ಯಗಳಿಗೆ ತೊಂದರೆಯಾಗುವ ಕಾರಣ, ಇವರ ಬದಲಿಗೆ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ ಅಥವಾ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬಿಜಾಪುರ ಇವರನ್ನು ಸದರಿ ಪ್ರಕರಣದಲ್ಲಿ ಮಂಡನಾಧಿಕಾರಿಯಾಗಿ ನೇಮಿಸುವಂತೆ ಕೋರಿರುತ್ತಾರೆ. ಇವರ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 280 ಕೆಇವಿ 07 (ಸಿಆಸುಇ 140 ಎಸ್‌ಇಎಸ್ 01),**
**ಬೆಂಗಳೂರು, ದಿನಾಂಕ: 23ನೇ ನವೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 11(5)(c)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಬಾಗಲಕೋಟೆ ಇವರ ಬದಲಿಗೆ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2116

**ಹೆಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು-2)

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ :** 2007-08ನೇ ಸಾಲಿನಲ್ಲಿ ಪ್ರಾರಂಭ ಮಾಡಲ್ಪಟ್ಟ 75 ಹೊಸ ಮೆಟ್ರಿಕ್ ಪೂರ್ವ/ ಮೆಟ್ರಿಕ್ ನಂತರದ ಬಾಲಕರ/ ಬಾಲಕಿಯರ ವಸತಿ ನಿಲಯಗಳಿಗಾಗಿ 388 ಹುದ್ದೆಗಳನ್ನು ಸೃಜಿಸುವ ಹಾಗೂ ಅನುದಾನ ಬಿಡುಗಡೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :**
1. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ರವರ ಪ್ರಸ್ತಾವನೆ ಸಂಖ್ಯೆ: ಸಕನಿ/ ಇಡಿ4/ ಸಿಆರ್-6/ 2007-08, ದಿನಾಂಕ 4-5-2007.
2. ಸರ್ಕಾರಿ ಆದೇಶ ಸಂಖ್ಯೆ: ಸಕಇ 197 ಪಕವಿ 2007, ದಿನಾಂಕ 14-6-2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಮಾಜ ಕಲ್ಯಾಣ ಇಲಾಖೆಯ ಆಯುಕ್ತರ ಪ್ರಸ್ತಾವನೆಯಲ್ಲಿ 2007-08ನೇ ಸಾಲಿನ ಆಯವ್ಯಯ ಮುಂಗಡ ಭಾಷಣದಲ್ಲಿ ಪರಿಶಿಷ್ಟ ಜಾತಿಯವರ ಕಲ್ಯಾಣಕ್ಕಾಗಿ 75 ಹೊಸ ಪರಿಶಿಷ್ಟ ಜಾತಿಯ ವಿದ್ಯಾರ್ಥಿ ನಿಲಯಗಳನ್ನು ಪ್ರಾರಂಭಿಸುವುದಾಗಿ ಘೋಷಿಸಲಾಗಿದೆಯೆಂತಲೂ, ಇದಕ್ಕಾಗಿ 2007-08ನೇ ಸಾಲಿನ ರಾಜ್ಯ ಆಯವ್ಯಯ ಯೋಜನೆಯ ಲೆಕ್ಕ ಶೀರ್ಷಿಕೆ 2225-01-277-0-63ರಡಿ ರೂ. 600.00 ಲಕ್ಷಗಳ ಅನುದಾನವನ್ನು ಕಾಯ್ದಿರಿಸಿಕೊಳ್ಳಲಾಗಿದೆ. ಇದರಲ್ಲಿ ರೂ. 598.89848ಗಳನ್ನು ಬಿಡುಗಡೆ ಮಾಡಲು ಸರ್ಕಾರದ ಆದೇಶವನ್ನು ಕೋರಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶ ದಿನಾಂಕ 14-6-2007ರಲ್ಲಿ 50 ಮೆಟ್ರಿಕ್ ಪೂರ್ವ ಹಾಗೂ 25 ಮೆಟ್ರಿಕ್ ನಂತರದ ಬಾಲಕ/ಬಾಲಕಿಯರ ವಿದ್ಯಾರ್ಥಿ ನಿಲಯಗಳನ್ನು ಮಂಜೂರು ಮಾಡಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 197 ಪಕವಿ 2007, ಬೆಂಗಳೂರು, ದಿನಾಂಕ: 1ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2007-08ನೇ ಸಾಲಿನಲ್ಲಿ ಪ್ರಾರಂಭ ಮಾಡಲ್ಪಟ್ಟ ಪರಿಶಿಷ್ಟ ಜಾತಿಯ 75 ಹೊಸ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ಬಾಲಕರ/ಬಾಲಕಿಯರ ವಿದ್ಯಾರ್ಥಿ ನಿಲಯಗಳಿಗಾಗಿ ಈ ಕೆಳಕಂಡ ಒಟ್ಟು 388 ಹುದ್ದೆಗಳನ್ನು ಈ ಕೆಳಕಂಡಂತೆ ಸೃಜಿಸಲು ಅನುಮೋದನೆ ನೀಡಿ ಆದೇಶಿಸಿದೆ.

**ಮೆಟ್ರಿಕ್ ಪೂರ್ವ ಬಾಲಕರ ವಿದ್ಯಾರ್ಥಿ ನಿಲಯಗಳು**

| ಕ್ರ.ಸಂ. | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1 | ಮೇಲ್ವಿಚಾರಕರು | 25 |
| 2 | ಅಡಿಗೆಯವರು | 50 |
| 3 | ಅಡಿಗೆ ಸಹಾಯಕರು | 50 |
| | **ಒಟ್ಟು** | **125** |

**ಮೆಟ್ರಿಕ್ ಪೂರ್ವ ಬಾಲಕಿಯರ ವಿದ್ಯಾರ್ಥಿ ನಿಲಯಗಳು**

| ಕ್ರ.ಸಂ. | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1 | ಮೇಲ್ವಿಚಾರಕರು | 25 |
| 2 | ಅಡಿಗೆಯವರು | 50 |
| 3 | ಅಡಿಗೆ ಸಹಾಯಕರು | 50 |
| 4 | ಕಾವಲುಗಾರರು | 25 |
| | **ಒಟ್ಟು** | **150** |

**ಮೆಟ್ರಿಕ್ ನಂತರದ ಬಾಲಕರ ವಿದ್ಯಾರ್ಥಿ ನಿಲಯಗಳು**

| ಕ್ರ.ಸಂ. | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1 | ಮೇಲ್ವಿಚಾರಕರು | 12 |
| 2 | ಅಡಿಗೆಯವರು | 24 |
| 3 | ಅಡಿಗೆ ಸಹಾಯಕರು | 12 |
| | **ಒಟ್ಟು** | **48** |

**ಮೆಟ್ರಿಕ್ ನಂತರದ ಬಾಲಕಿಯರ ವಿದ್ಯಾರ್ಥಿ ನಿಲಯಗಳು**

| ಕ್ರ.ಸಂ. | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1 | ಮೇಲ್ವಿಚಾರಕರು | 13 |
| 2 | ಅಡಿಗೆಯವರು | 26 |
| 3 | ಅಡಿಗೆ ಸಹಾಯಕರು | 13 |
| 4 | ಕಾವಲುಗಾರರು | 13 |
| | **ಒಟ್ಟು** | **65** |

ಸದರಿ ವಿದ್ಯಾರ್ಥಿ ನಿಲಯಗಳಿಗೆ ತಗಲುವ ವೆಚ್ಚವನ್ನು ಭರಿಸಲು 2007–08ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಮೊದಲ ಕಂತಾಗಿ ರೂ. 1.00 ಕೋಟಿ (ಒಂದು ಕೋಟಿ ರೂಪಾಯಿಗಳು ಮಾತ್ರ)ಗಳನ್ನು ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ ರವರಿಗೆ ಬಿಡುಗಡೆ ಮಾಡಿ ಆದೇಶಿಸಲಾಗಿದೆ.

ಈ ವೆಚ್ಚವನ್ನು 2007–08ನೇ ಸಾಲಿನ ರಾಜ್ಯ ಆಯವ್ಯಯ ಲೆಕ್ಕಶೀರ್ಷಿಕೆ "2225–01–277–0–63 ಯೋಜನೆ" ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 424 ವೆಚ್ಚ–3/07 ದಿನಾಂಕ 7–11–2007ರಲ್ಲಿನ ಸಹಮತಿ ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ ಇವರಿಗೆ ಪ್ರದತ್ತವಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 24

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಉಪ ಕಾರ್ಯದರ್ಶಿ–1,

ಸಮಾಜ ಕಲ್ಯಾಣ ಇಲಾಖೆ

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ ಇದರಡಿ 2006–07 ಮತ್ತು 2007–08ನೇ ಸಾಲಿಗೆ ಬಾಕಿ ಇರುವ ರಾಜ್ಯದ ಪಾಲಿನ ಅನುದಾನವನ್ನು ಚಿತ್ರದುರ್ಗ ಜಿಲ್ಲೆಗೆ 2007–08ನೇ ಸಾಲಿನಲ್ಲಿ ಬಿಡುಗಡೆ ಮಾಡುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 49 ಉಖಾಯೋ 06, ಬೆಂಗಳೂರು ದಿನಾಂಕ 29–3–2007.
2. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜೆ–12015/2006–NREGA Sl.No.185 ದಿ: 21–3–2007.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜೆ–12011/2007– NREGA Sl.No.13 ದಿನಾಂಕ 9–4–2007.

**ಪ್ರಸ್ತಾವನೆ :**

ಉಲ್ಲೇಖ (1)ರಲ್ಲಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿದ ತನ್ನ ಪಾಲಿನ ಅನುದಾನಕ್ಕೆ ಅನುದಾನದ ಕೊರತೆಯಿಂದ ಚಿತ್ರದುರ್ಗ ಜಿಲ್ಲೆಗೆ ಪೂರ್ಣ ಪ್ರಮಾಣದಲ್ಲಿ ಬಿಡುಗಡೆ ಮಾಡದೇ, ರೂ. 4.17 ಲಕ್ಷಗಳನ್ನು ಬಿಡುಗಡೆ ಮಾಡಲು ಬಾಕಿ

ಉಳಿಸಿಕೊಳ್ಳಲಾಗಿತ್ತು. ಈಗ ಸದರಿ ಅನುದಾನವನ್ನು 2007–08ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಬಿಡುಗಡೆ ಮಾಡಲು ತೀರ್ಮಾನಿಸಲಾಗಿದೆ. ಉಲ್ಲೇಖ (2)ರಲ್ಲಿ, ಕೇಂದ್ರ ಸರ್ಕಾರವು ರೂ. 2500.00 ಲಕ್ಷಗಳನ್ನು ಚಿತ್ರದುರ್ಗ ಜಿಲ್ಲೆಗೆ ನೇರವಾಗಿ ಬಿಡುಗಡೆ ಮಾಡಿ, ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು ಬಿಡುಗಡೆ ಮಾಡಲು ಆದೇಶಿಸಿದೆ. ಶೇಕಡಾ 10ರಷ್ಟಿನ ರೂ. 250.00 ಲಕ್ಷಗಳ ರಾಜ್ಯದ ಪಾಲಿನ ಅನುದಾನವನ್ನು 2007–08ನೇ ಸಾಲಿನಲ್ಲಿ ಎಸ್‌ಜಿಆರ್‌ವೈ ಯೋಜನೆಗೆ ಆಯವ್ಯಯದಲ್ಲಿ ಒದಗಿಸಲಾದ ಅನುದಾನದಿಂದ ಬಿಡುಗಡೆ ಮಾಡಲು ತೀರ್ಮಾನಿಸಲಾಗಿದೆ. ಉಲ್ಲೇಖ (3)ರಲ್ಲಿ ಕೇಂದ್ರ ಸರ್ಕಾರವು 2007–08ನೇ ಸಾಲಿನಲ್ಲಿ ಚಿತ್ರದುರ್ಗ ಜಿಲ್ಲೆಗೆ ಮೊದಲನೇ ಕಂತಾಗಿ ರೂ. 1078.75 ಲಕ್ಷಗಳನ್ನು ನೇರವಾಗಿ ಬಿಡುಗಡೆ ಮಾಡಿ ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಕೂಡಲೆ ಬಿಡುಗಡೆ ಮಾಡುವಂತೆ ಆದೇಶಿಸಿದೆ. ಸದರಿ ರಾಜ್ಯದ ಪಾಲಿನ ಅನುದಾನವನ್ನು ಪ್ರಚಲಿತ ವರ್ಷದಲ್ಲಿ ರಾಜ್ಯದ ಆಯವ್ಯಯವು ಎಸ್‌ಜಿಆರ್‌ವೈ ಯೋಜನೆಯ ಲೆಕ್ಕಶೀರ್ಷಿಕೆಯಲ್ಲಿ ಒದಗಿಸಲಾದ ಅನುದಾನದಿಂದ ಬಿಡುಗಡೆ ಮಾಡಲು ನಿರ್ಧರಿಸಲಾಗಿದೆ. ಹೀಗಾಗಿ ಒಟ್ಟು ರಾಜ್ಯದ ಪಾಲಿನ ಅನುದಾನವಾದ ರೂ. 362.045 ಲಕ್ಷಗಳ ಅನುದಾನವನ್ನು ಅನುಬಂಧದಲ್ಲಿ ನಮೂದಿಸಿದಂತೆ, ಚಿತ್ರದುರ್ಗ ಜಿಲ್ಲೆಗೆ ಎಸ್‌ಜಿಆರ್‌ವೈ ಯೋಜನೆಯ ಲೆಕ್ಕಶೀರ್ಷಿಕೆಯಿಂದ ಬಿಡುಗಡೆ ಮಾಡಲು ನಿರ್ಧರಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 49 ಉಖಾಯೋ 06, ಬೆಂಗಳೂರು, ದಿನಾಂಕ: 13ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ ಇದರಡಿ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ರಾಜ್ಯದ ಪಾಲಿನ ಅನುದಾನವಾದ ರೂ. 362.045 ಲಕ್ಷಗಳನ್ನು (ರೂ. ಮೂರುಕೋಟಿ ಅರವತ್ತೆರಡು ಲಕ್ಷಗಳ ನಾಲ್ಕು ಸಾವಿರದ ಐನೂರು ಮಾತ್ರ) ಅನುಬಂಧದಲ್ಲಿ ನಮೂದಿಸಿದಂತೆ, 2007–08ನೇ ಸಾಲಿನಲ್ಲಿ ಸಾಮಗ್ರಿ ಘಟಕದ ವೆಚ್ಚಕ್ಕೆ ಮಾತ್ರ ಬಳಸಲು ಚಿತ್ರದುರ್ಗ ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003, ದಿನಾಂಕ 14–7–2005 ಮತ್ತು ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ–1/ಜಡ್‌ಪಿಎ 2007 (ಪಿ–2) ದಿನಾಂಕ 26–4–2007ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ನಿಧಿ–1ಕ್ಕೆ ಜಮೆ ಮಾಡಿಕೊಂಡು ವೆಚ್ಚವನ್ನು ನಿರ್ವಹಣೆ ಮಾಡುವುದು ಹಾಗೂ ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಈ ಅನುದಾನದ ವೆಚ್ಚವನ್ನು ಭರಿಸತಕ್ಕದ್ದು.

1. ಜಿಲ್ಲಾ ಪಂಚಾಯತಿ 2505 ಗ್ರಾಮೀಣ ಉದ್ಯೋಗ–60–ಇತರೆ ಕಾರ್ಯಕ್ರಮಗಳು–196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ–6–ಜಿಲ್ಲಾ ಪಂಚಾಯತಿಗಳು–04–ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆ (2505–60–196–6–04) 2007–08 (ಯೋಜನೆ).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ, ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ 1–2–2007ರಂದು ಅಧಿಸೂಚಿಸಿರುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಗ್ರಾಅಪ/489/ ಪಿಬಿಎಸ್/2007, ದಿನಾಂಕ 7–12–2007ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎನ್. ಕೃಷ್ಣಯ್ಯ**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**Annexure to G.O. No. RDP/49/NRE/2006, Bangalore Dated: 13-12-2007**

**Statement showing the release of balance of State Share of funds pertaining to 2006-07 & 2007-08 under SGRY during 2007-08 for utilization to the programmes of NREGA.**

(Rs. in lakhs)

| Sl. No. | District | Object Code | Central release dated | | State share proposed for releases as per Col.4 | Funds alerady released during 2007-08 | Balance of funds being released in this order under H/A (2505-60-196-6-04) |
|---|---|---|---|---|---|---|---|
| | | | Date | Amount | | | |
| | | | 17-11-06 | 5000.00 | 500.000 | 495.83 | 4.170 |

| | | | | | | | |
|---|---|---|---|---|---|---|---|
| 1 | Chitradurga | 403 | 21-3-07 | 2500.00 | 250.000 | - | 250.000 |
| | | | 9-4-07 | 1078.75 | 107.875 | - | 107.875 |
| | | **Total** | | **8578.75** | **857.875** | **495.83** | **362.045** |

**B.N. KRISHNAIAH**
P.R.25 Director (SEP)
E/o Additional Secretary to Government,
Rural Development & Pan. Raj Dept.

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ ಇದರಡಿ ಕೇಂದ್ರ ಸರ್ಕಾರವು 2007–08ನೇ ಸಾಲಿನಲ್ಲಿ ಬಿಡುಗಡೆ ಮಾಡಿರುವ ತನ್ನ ಪಾಲಿನ ಅನುದಾನಕ್ಕೆ ರಾಜ್ಯದ ಪಾಲಿನ ಅನುದಾನವನ್ನು ಮೊದಲನೇ ಕಂತಾಗಿ ರಾಯಚೂರು ಜಿಲ್ಲೆಗೆ ಬಿಡುಗಡೆ ಮಾಡುತ್ತಿರುವ ಬಗ್ಗೆ.

**ಉಲ್ಲೇಖ :** ಕೇಂದ್ರ ಸರ್ಕಾರದ ಪತ್ರ ಸಂಖ್ಯೆ ಜೆ–12022/2/2007–NREGA Sl.No.248 ದಿ: 1–11–2007.

**ಪ್ರಸ್ತಾವನೆ :**

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ, 2007–08ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ರೂ. 859.30 ಲಕ್ಷಗಳನ್ನು ಮೊದಲನೇ ಕಂತಾಗಿ ನೇರವಾಗಿ ರಾಯಚೂರು ಜಿಲ್ಲೆಗೆ ಬಿಡುಗಡೆ ಮಾಡಿ, ರಾಜ್ಯ ಸರ್ಕಾರವು ತನ್ನ ಪಾಲಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಸೂಚಿಸಿದೆ. ಅದರಂತೆಯೇ, ಮಾರ್ಗಸೂಚಿಗಳನ್ವಯ, ಶೇಕಡಾ 10ರಷ್ಟಿನ, ರಾಜ್ಯವು ತನ್ನ ಪಾಲಿನ ಮೊದಲನೇ ಕಂತಿನ ಅನುದಾನವಾದ ರೂ. 85.930 ಲಕ್ಷಗಳನ್ನು ಸಾಮಗ್ರಿ ಘಟಕದ ವೆಚ್ಚಕ್ಕೆ ಬಳಸಲು 2007–08ನೇ ಸಾಲಿನಲ್ಲಿ ಎಸ್‌ಜಿಆರ್‌ವೈ ಯೋಜನೆಯ ಲಿಂಕ್ ಲೆಕ್ಕಶೀರ್ಷಿಕೆಯಾದ 196ರಲ್ಲಿ ಒದಗಿಸಲಾದ ಅನುದಾನದಿಂದ ರಾಯಚೂರು ಜಿಲ್ಲೆಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 03 ಉಖಾಯೋ 07, ಬೆಂಗಳೂರು, ದಿನಾಂಕ: 11ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ ಇದರಡಿ ಕಾಮಗಾರಿಗಳ ಅನುಷ್ಠಾನಕ್ಕಾಗಿ ಕೇಂದ್ರ ಸರ್ಕಾರದ ಆದೇಶದನ್ವಯ ಸಾಮಗ್ರಿಗಳ ಘಟಕದ ವೆಚ್ಚಕ್ಕಾಗಿ ಬಳಸಲು, ಕೇಂದ್ರ ಸರ್ಕಾರದ ಅನುದಾನಕ್ಕೆ ಪೂರಕವಾಗಿ 2007–08ನೇ ಸಾಲಿನಲ್ಲಿ ರಾಜ್ಯದ ಪಾಲಿನ ಅನುದಾನವಾದ ರೂ. 85.930 ಲಕ್ಷ (ರೂ. ಎಂಭತ್ತೈದು ಲಕ್ಷಗಳ ತೊಂಭತ್ತಮೂರು ಸಾವಿರ ಮಾತ್ರ)ಗಳನ್ನು ಮೊದಲನೇ ಕಂತಾಗಿ ಅನುಬಂಧದಲ್ಲಿ ನಮೂದಿಸಿದಂತೆ, ರಾಯಚೂರು ಜಿಲ್ಲೆಗೆ ಬಿಡುಗಡೆ ಮಾಡಿದೆ.

ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003, ದಿನಾಂಕ 14–7–2005 ಮತ್ತು ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ–1/ಜಡ್‌ಪಿಎ 2007 (ಪಿ–2) ದಿನಾಂಕ 26–4–2007ರನ್ವಯ ಅನುದಾನವನ್ನು ಖಜಾನೆಯಿಂದ ಪಡೆದು ನಿಧಿ–1ಕ್ಕೆ ಜಮೆ ಮಾಡಿಕೊಂಡು ವೆಚ್ಚವನ್ನು ನಿರ್ವಹಣೆ ಮಾಡುವುದು ಹಾಗೂ ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಈ ಅನುದಾನದ ವೆಚ್ಚವನ್ನು ಭರಿಸತಕ್ಕದ್ದು.

1. ಜಿಲ್ಲಾ ಪಂಚಾಯತಿ 2505 ಗ್ರಾಮೀಣ ಉದ್ಯೋಗ–60–ಇತರೆ ಕಾರ್ಯಕ್ರಮಗಳು–196 ಜಿಲ್ಲಾ ಪಂಚಾಯತಿಗಳಿಗೆ ಸಹಾಯ–6–ಜಿಲ್ಲಾ ಪಂಚಾಯತಿಗಳು–04–ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆ (2505–60–196–6–04) 2007–08 (ಯೋಜನೆ).

ಈಗ ಬಿಡುಗಡೆ ಮಾಡುವ ಅನುದಾನವನ್ನು ಸಾಮಗ್ರಿ ಘಟಕಕ್ಕೆ ಮಾತ್ರ ಬಳಸಿಕೊಳ್ಳತಕ್ಕದ್ದು. ಪಂಚಾಯತ್ ರಾಜ್ ಸಂಸ್ಥೆಗೆ ಸಂಬಂಧಪಟ್ಟ ಅಧಿಕಾರಿಗಳು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗೆ ಸಂಬಂಧಿಸಿದಂತೆ, ಅಧಿನಿಯಮದ ಪ್ರಕರಣಗಳು, ಕೇಂದ್ರ ಸರ್ಕಾರದ ನಿರ್ವಹಣೆಯ ಮಾರ್ಗಸೂಚಿಗಳು, ಸುತ್ತೋಲೆಗಳು, ಆದೇಶಗಳು ಹಾಗೂ ರಾಜ್ಯ ಸರ್ಕಾರವು ದಿನಾಂಕ 1–2–2007ರಂದು ಅಧಿಸೂಚಿಸಿರುವ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ ಇದರ ಮಾರ್ಗಸೂಚಿಗಳ ರೀತ್ಯಾ ಕ್ರಮ ತೆಗೆದುಕೊಳ್ಳತಕ್ಕದ್ದು.

ಸರ್ಕಾರದ ಆದೇಶವನ್ನು ಈ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ ಗ್ರಾಅಪ/501/ ಪಿಬಿಎಸ್/2007, ದಿನಾಂಕ 15–12–2007ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎನ್. ಕೃಷ್ಣಯ್ಯ**
ನಿರ್ದೇಶಕರು,
ಸ್ವ ಉದ್ಯೋಗ ಕಾರ್ಯಕ್ರಮಗಳು ಹಾಗೂ
ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**Annexure to G.O. NO. RDP/3/NRE/2007, Bangalore Dated: 11-12-2007**
**Statement showing the release of balance of State Share of funds under SGRY during 2007-08 for utilization to the programmes of NREGA.**

(Rs. in lakhs)

| Sl. No. | District | Object Code | Central release dated 22-2-2007 | | State share proposed for releases as per Col.4 | Funds being released in this order under H/A (2505-60-196-6-04) |
|---|---|---|---|---|---|---|
| | | | Date | Amount | | |
| 1 | Raichur | 420 | 1-11-07 | 859.30 | 85.930 | 85.930 |

P.R.26

**B.N. KRISHNAIAH**
Director (SEP)
E/o Additional Secretary to Government,
Rural Development & Pan. Raj Dept.

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ :** ಹಾಸನ ನಗರದ ಪರಿಧಿಯಲ್ಲಿ ಹೊರ ವರ್ತುಲ ರಸ್ತೆ ನಿರ್ಮಾಣ.

**ಓದಲಾಗಿದೆ :** 1. ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ. ಕರಅನಿನಿ/ಮು.ಇ./ 2450/2007–08, ದಿನಾಂಕ 16–12–2007.
2. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಲೋಇ 1174 ಆಕೋ–I/07 ದಿನಾಂಕ 29–12–2007.

**ಪ್ರಸ್ತಾವನೆ :**

ಓದಲಾದ (1)ರ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ ಹಾಸನ ನಗರದ ಪರಿಧಿಯಲ್ಲಿ ಹೊರ ವರ್ತುಲ ರಸ್ತೆ ನಿರ್ಮಾಣಕ್ಕೆ ಸಂಬಂಧಿಸಿದಂತೆ, ಉಪವಿಭಾಗಾಧಿಕಾರಿಗಳು ಮತ್ತು ಭೂಸ್ವಾಧೀನಾಧಿಕಾರಿಗಳು, ಹಾಸನ ಉಪ ವಿಭಾಗ, ಹಾಸನ ಇವರು ಭೂಸ್ವಾಧೀನದ ಪ್ರಕ್ರಿಯೆಗಾಗಿ ರೂ. 10.00 ಕೋಟಿಗಳನ್ನು ಠೇವಣಿಯಾಗಿ ಇಡಲು ಕೋರಿರುತ್ತಾರೆಂದು ಹಾಗೂ ಸದರಿ ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಪ್ರಸಕ್ತ ಸಾಲಿಗೆ ನಿಗಮಕ್ಕೆ ನಿಗಧಿಗೊಳಿಸಿದ ರೂ. 40.00 ಕೋಟಿಗಳು ಒಟ್ಟು ರೂ. 50.00 ಕೋಟಿಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ.

ಓದಲಾದ (2)ರ ಆರ್ಥಿಕ ಇಲಾಖೆಯ ಟಿಪ್ಪಣಿಯಲ್ಲಿ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭಿಸಲು ಪ್ರಾರಂಭಿಕ ಠೇವಣಿ ಇಡಲು ಲೆಕ್ಕಶೀರ್ಷಿಕೆ "5054–03–337–0–10–172 (ಯೋಜನೆ)" ಅಡಿಯಲ್ಲಿ ಹಾಸನ ಹೊರಮ್ಯೆ ವರ್ತುಲ ರಸ್ತೆಗಾಗಿ ಒದಗಿಸಿರುವ ಅನುದಾನದಲ್ಲಿ ರೂ. 6,63,60,000.00 (ಆರು ಕೋಟಿ ಅರವತ್ತ ಮೂರು ಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ಸಹಮತಿ ನೀಡಿರುತ್ತದೆ.

ಮೇಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲೋಇ 64 ಇಎಪಿ 2007, ಬೆಂಗಳೂರು, ದಿನಾಂಕ: 3ನೇ ಜನವರಿ 2008**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಲೆಕ್ಕಶೀರ್ಷಿಕೆ "5054–03–337–0–10–172 (ಯೋಜನೆ)" ಅಡಿಯಲ್ಲಿ ಹಾಸನ ಹೊರಮ್ಯೆ ವರ್ತುಲ ರಸ್ತೆಗಾಗಿ ಒದಗಿಸಿರುವ ಅನುದಾನದಲ್ಲಿ ರೂ. 6,63,60,000.00 (ಆರು ಕೋಟಿ ಅರವತ್ತ ಮೂರು ಲಕ್ಷ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಲು ಆದೇಶ ಹೊರಡಿಸಲಾಗಿದೆ.

ಮುಂದುವರೆದು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ರೂ. 6,63,60,000.00 (ಆರು ಕೋಟಿ ಅರವತ್ತ ಮೂರು ಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳನ್ನು ಲೆಕ್ಕಶೀರ್ಷಿಕೆ "5054–03–337–0–10–172 (ಯೋಜನೆ)" ಅಡಿಯಲ್ಲಿ ಬಿಡುಗಡೆ ಮಾಡಿರುವುದರಿಂದ ಸದರಿ ಬಿಲ್ಲನ್ನು ಕೆ.ಎಫ್.ಸಿ. 17(ಸಿ)4 ರಲ್ಲಿನಂತೆ ಮಹಾಲೇಖಪಾಲರು (ಎ ಅಂಡ್ ಇ) ಇದರಿಂದ ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲುರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಲೋಇ 1174 ಆಕೋ–I/07, ದಿನಾಂಕ 29–12–2007ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 42

**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

**AGRICULTURE AND HORTICULTURE SECRETARIAT**

**Sub :** Setting up of the "State Agriculture Management Agency" – regarding.

**Read :** 1. D.O. letter No. CPS 12-1/2007-CU dated 13-9-2007 from Sri Mukesh Khullar, Joint Secretary, Ministry of Agriculture, Government of India, New Delhi.

2. State Level Steering Committee Meeting held under the Chairmanship of ACS & Development Commissioner on 17-9-07.

**Preamble:**

The National Development Council (NDC) in its 53rd meeting held on 29th May 2007 adopted a resolution to launch a Food Security Mission comprisiong rice, wheat and pulses to increase the production and productivity of rice by 10 million tons, wheat by 8 million ton sand pulses by 2 million tons by the end of eleventh five year plan ending 2011-12. Accordingly, a Centrally Sponsored Scheme called as National Food Security Mission has been launched from 2007-08 to operationalize the above-mentioned resolution. This Mission will have three components viz, (i) National Food Security Mission for Rice (NSFM-rice (ii) National Food Security Mission for Wheat (NFSM-Wheat) and (iii) National Food Security Mission for Pulses (NFSM-Pules)

The Joint Secretary, Ministry of Agriculture, Governemnt of India, New Delhi in his D.O. letter read above addressed to Principal Secretary to Government, Agriculture & Horticulture Department among other things has requested him to identify/ constitute an autonomous agency to take up the programmes envisaged under National Food Security Mission in the State so as to enable the Government of India to transfer/ release the money directly to the identified agency since the Mission money will be routed only through an autonomous agency.

This issue was dicussed in the State Level Steering Committee meeting held under the Chairmanship of ACS & Development Commissioner on 17-9-2007 to discuss the preparation of Comprehensive State / District Agriculture Plan where in the Principal Secretary; Agriculture explained the objective of launching National Food Security Mission during 11th Plan to the officers present in the meeting.

Keeping in view of the urgency for setting up of an autonomous agency to implement the programmes envisaged under National Food Security Mission and in view of commencement of sowing of rabi crops in some parts of the State, it has been decided to set up an autonomous agency to be named as **State Agriculture Management Agency (SAMA)** under Society Registration Act 1960 and to authorize the Commissioner for Agriculture to register the Society with the District Registrar immediately. Hence this order.

**Government Order No. AHD 466 AMS 2007, Bangalore, Dated 5th September 2007**

Under the circumstances explained in the preamble portion of this order, Government are pleased to set up an autonomous agency called **"State Agriculture Management Agency" (SAMA) with immediate effect and until further orders under Karnataka Societies Registration Act 1960** and as per the Memorandum of Association and Rules and Regulations placed at Annexure-I and Annexure-II respectively. The Commisioner for Agriculture is authorized to register the above agency under Society Registration Act 1960 immediately.

The expenditure involved in registering the above Agency shall be met out of the Department of Agriculture funds.

By order and in the name of the Governor of Karnataka,

**A.B. SIDDHANTI**

Deputy Secretary to Government,

Agriculture & Horticulture Department.

**ANNEXURE-I**

**Government Order No. AHD 466 AMS 2007, Bangalore dated 5-10-2007**

**MEMORANDUM OF ASSOCIATION OF STATE AGRICUTLURE MANAGEMENT AGENCY**

**1. NAME OF THE SOCIETY**

The name of the society shall be State Agriculture Management Agency (hereinafter referred to as "SAMA" or the 'Society'). The Society is sponsored by Government of Karnataka.

**2. REGISTERED OFFICE**

The Registered Office of the Society shall be situated at Bangalore and at present at Commissioner rate of Agriculture, Seshadri Road, Bangalore-560 001.

**3. AREA OF OPERATION:**

The area of operation of the Society shall be the whole of Karnataka.

**4. AIMS AND OBJECTIVES**

**4.1 The aims and objectives of the Society shall be;**

4.1.1. To develop agriculture to the maximum potential available in the State and to augment production of all agricultural crops

4.1.2. To enhance the income of the farmers particularly small and marginal farmers thereby making a dent on poverty;

4.1.3. To promote direct and indirect employment in the primary, secondary and tertiary sector connected with agriculture;

4.1.4. To promote export of agricultural products and reduce their imports;

4.1.5. To provide extension of appropriate technology to farmers including high-tech agriculture and adoption of measures to improve availability of quality seeds, fertilizers and pesticides;

4.1.6. To improve and adopt end-to-end approach covering production, post harvest management, processing by value addition and marketing so that the farmers get remunerative returns;

4.1.7. To promote Research and Development in technologies relating to production, post harvest management, processing, marketing and export of agriculture products;

4.1.8. To have a co-ordinated approach and promotion of partnership, convergence and synergy among Research and Development, procesing and marketing agencies in Government as well as private sector and between Central Government, State Government and Sub-State agencies;

4.1.9. To promote farmers' organizations such as societies, co-operative societies, companies at different levels to enable efficient market support and to get adequate returns to farmers.

4.1.10. To strengthen capacity building and human resource development at all levels;

4.1.11. To provide for management of risk for the farmers.

**4.2. In Pursuance of the aforeaid objectives, the Society may**

4.2.1. Make rule and bye-laws for the conduct of the affairs of the Society and add to, amend, vary or rescind them from time to time;

4.2.2. Raise funds and accept donations or grants in cash or in kind including property of any kind.

4.2.3. Borrow money required for the purpose of the Society with or without security upon such terms and in such manner as may be determined by the State Executive Committee of the Society with or without the prior approval of the State Government; as the case may be.

4.2.4. Invest any money of the Society not immediately required for any of its objectives in such a manner as determined by the State Executive Committee of the Society;

4.2.5. Meet out of the funds of the Society all expenses, which the Society may incur with respect to the formation, registration and operations of the Society;

4.2.6. Open bank accounts of any type including overdraft account as determined by the State Executive Committee of the Society and operate the same in ordinary course of business;

4.2.7. Own, establish or have and maintain offices, branches and agencies within the State for the purpose of carrying on its business;

4.2.8. Promote, form, conduct or associate in the promotion, formation or conduct of companies, subsidiaries, societies or such other associations, of persons as it may deem fit;

ಪಾಸು ಮಾಡಿರುವುದರಿಂದ ದಿನಾಂಕ 27-3-2007ರಂದು ಖಾಯಂ ಪೂರ್ವಾವಧಿ ಸೇವೆಯನ್ನು ತೃಪ್ತಿಕರವಾಗಿ ಪೂರೈಸಿದ್ದಾರೆಂದು ಘೋಷಿಸಲು ಸರ್ಕಾರವನ್ನು ಕೋರಿರುವರು, ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 130 ನಯೋಸೇ 2007, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2007**

ಕರ್ನಾಟಕ ಸರ್ಕಾರಿ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ನಿಯಮ 5(1)(ಎ)ರ ಪ್ರದತ್ತವಾಗಿರುವ ಅಧಿಕಾರವನ್ನು ಬಳಸಿ ಶ್ರೀಮತಿ ವೀಣಾ ಮೋಹನ್ ಭೋಜ್, ಕಿರಿಯ ನಗರ ಯೋಜಕರು ಇವರು ದಿನಾಂಕ 27-3-2007ರಂದು ಖಾಯಂ ಪೂರ್ವ ಪರೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿದ್ದಾರೆಂದು ಘೋಷಿಸಲಾಗಿದೆ.

| ಕ್ರಮ ಸಂಖ್ಯೆ | ಪರೀಕ್ಷಾರ್ಥಿಯಾಗಿದ್ದ ಕಿರಿಯ ನಗರ ಯೋಜಕರ ಹೆಸರು | ಕಿರಿಯ ನಗರ ಯೋಜನಕರ ಹುದ್ದೆಗೆ ಇಲಾಖೆಯಲ್ಲಿ ಸೇರಿದ ದಿನಾಂಕ | ಖಾಯಂ ಪೂರ್ವಾವಧಿಯನ್ನು ಮುಕ್ತಾಯಗೊಳಿಸಿರುವ ದಿನಾಂಕ |
|---|---|---|---|
| 1 | ಶ್ರೀಮತಿ ವೀಣಾ ಮೋಹನ್ ಭೋಜ್ | 28-3-2005 | 27-3-2007 |

ಭಾರತ ಸರ್ಕಾರದ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 29

**ಎಸ್.ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**ಕನ್ನಡ ಮತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ವಿಜಾಪುರ ಜಿಲ್ಲಾ ಗ್ಯಾಸೆಟಿಯರ್ (ಆಂಗ್ಲ) ಪ್ರಕಟಣೆಯ ಮಾರಾಟ ಬೆಲೆ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ :** ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಬೆಂಗಳೂರು, ಇವರ ಪತ್ರ ಸಂಖ್ಯೆ: ಕಗ್ಯಾಇಗೆ (2) ಜಿ.ಜಿ.ಗ್ಯಾ. 2006-07/1006, ದಿ: 20-2-07.

**ಪ್ರಸ್ತಾವನೆ :**

ಮೇಲೆ ಓದಲಾದ ದಿ: 20-2-2007ರ ಪತ್ರದಲ್ಲಿ ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರು ವಿಜಾಪುರ ಜಿಲ್ಲಾ ಗ್ಯಾಸೆಟಿಯರ್ ಆಂಗ್ಲ ಪ್ರಕಟಣೆಯ ಮಾರಾಟ ಬೆಲೆ ನಿಗಧಿಪಡಿಸುವ ಕುರಿತು ಕನ್ನಡದಿಂದ ಆಂಗ್ಲ ಭಾಷೆಗೆ ಭಾಷಾಂತರಗೊಂಡ ವಿಜಾಪುರ ಜಿಲ್ಲಾ ಗ್ಯಾಸೆಟಿಯರ್ ಮುದ್ರಣವು ಪೂರ್ಣಗೊಂಡಿದೆ. ಸದರಿ ಪ್ರಕಟಣೆಯ 500 (ಐದುನೂರು ಮಾತ್ರ) ಪ್ರತಿಗಳನ್ನು ಮುದ್ರಣ ಮಾಡಿದೆ. ಇದಕ್ಕೆ ತಗಲಿದ ಒಟ್ಟು ವೆಚ್ಚ ರೂ. 2,56,903/- (ಇದರಲ್ಲಿ ಪೇಪರ್ ಖರೀದಿ, ಮುದ್ರಣ, ಮ್ಯಾಫ್ ಖರೀದಿ, ವೆಚ್ಚಗಳು ಇತ್ಯಾದಿ ಸೇರಿವೆ) ಇದರಂತೆ ಬಿಡಿ ಪ್ರತಿಯ ಮಾರಾಟ ಬೆಲೆಯು ರೂ. 514/- ಇದ್ದು ಈ ಮೊತ್ತವನ್ನು ರೂ. 500/- ಗಳಿಗೆ ಮಿತಿಗೊಳಿಸಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 7 ಕರಾಗೆ 2007, ಬೆಂಗಳೂರು, ದಿನಾಂಕ: 28ನೇ ಡಿಸೆಂಬರ್ 2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನಲೆಯಲ್ಲಿ ವಿಜಾಪುರ ಜಿಲ್ಲಾ ಗ್ಯಾಸೆಟಿಯರ್ (ಆಂಗ್ಲ) ಬಿಡಿ ಪ್ರತಿಯ ಮಾರಾಟ ಬೆಲೆಯನ್ನು ರೂ. 520/- (ಐದುನೂರು ಇಪ್ಪತ್ತು) ಕ್ಕೆ ಸರ್ಕಾರ ನಿಗಧಿಪಡಿಸಿ ಆದೇಶಿಸಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಟಿಪ್ಪಣಿ ಸಂ: ಶಿಇ 454 ಎಫ್(ಬಿ.ಎ.) 2006 ದಿ: 26-6-2006ರಲ್ಲಿ ನೀಡಿರುವ ಸಮಹತಿಯ ಮೇರೆಗೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂ: ಎಫ್.ಡಿ. 1 ಟಿ.ಎಫ್.ಪಿ. 96 ದಿ: 10-7-96ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 36

**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಹೆಚ್. ಚಂದ್ರಶೇಖರಯ್ಯ ಹಾಗೂ ಶ್ರೀ ಎಸ್. ಕೃಷ್ಣಶೆಟ್ಟಿ, ನಿವೃತ್ತ ಮುಖ್ಯ ಇಂಜಿನಿಯರ್, ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ -ಆದೇಶ.

**ಓದಲಾಗಿದೆ :** 1. ನೋಟೀಸ್ ಕ್ರಮಾಂಕ ಸಿಆಸುಇ 133 ಎಸ್ಇಎನ್ 2004, ದಿ: 28-3-2006.

**ಪ್ರಸ್ತಾವನೆ :**

ಶ್ರೀ ಹೆಚ್. ಚಂದ್ರಶೇಖರಯ್ಯ, ನಿವೃತ್ತ ಮುಖ್ಯ ಇಂಜಿನಿಯರ್, ಇವರು ದಿನಾಂಕ 22–10–2001 ರಿಂದ 26–2–2003ರವರೆಗೆ ಮುಖ್ಯ ಇಂಜಿನಿಯರ್, ನೀರಾವರಿ ದಕ್ಷಿಣ ವಲಯ, ಮೈಸೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಹುಲ್ಲಹಳ್ಳಿ ಕಾಲುವೆ 0 ಕಿ.ಮೀ. ನಿಂದ 72ನೇ ಕಿ.ಮೀ. ರವರೆಗೆ ನಡೆದ ವಿವಿಧ ಕಾಮಗಾರಿಗಳು, ಕಳಪೆ ಕಾಮಗಾರಿಗಳಾಗಿದ್ದು, ಈ ಕಾಮಗಾರಿಗಳಲ್ಲಿ ಅಕ್ರಮ ಅವ್ಯವಹಾರ ಎಸಗಿದ ದುರ್ನಡತೆ ಆರೋಪಿಗಳಿಗಾಗಿ ದಿನಾಂಕ 28–3–2006ರಂದು ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳಲಾಯಿತು. ಸದರಿಯವರು ದಿನಾಂಕ 11–5–2006ರಂದು ಪ್ರತಿ ಹೇಳಿಕೆ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಶ್ರೀ ಎಸ್. ಕೃಷ್ಣಶೆಟ್ಟಿ, ನಿವೃತ್ತ ಮುಖ್ಯ ಇಂಜಿನಿಯರ್, ಇವರು ದಿನಾಂಕ 25–2–2002 ರಿಂದ 26–12–2002ರವರೆಗೆ ಕಬಿನಿ ಮತ್ತು ವರುಣ ನಾಲಾ ವೃತ್ತ, ಮೈಸೂರು ಇಲ್ಲಿ ಸೂಪರಿಂಟೆಂಡಿಂಗ್ ಇಂಜಿನಿಯರಾಗಿ ಕೆಲಸ ನಿರ್ವಹಿಸಿದ ಅವಧಿಯಲ್ಲಿ ಅವರ ವೃತ್ತದ ವ್ಯಾಪ್ತಿಯಲ್ಲಿ ಬರುವ ಹುಲ್ಲಹಳ್ಳಿ ಕಾಲುವೆಯ ಆಧುನೀಕರಣದಲ್ಲಿ 0 ಕಿ.ಮೀ. ನಿಂದ 72ನೇ ಕಿ.ಮೀ. ರವರೆಗೆ ನಡೆದ ವಿವಿಧ ಕಾಮಗಾರಿಗಳು ಕಳಪೆ ಕಾಮಗಾರಿಗಳಾಗಿದ್ದು ಕಾಮಗಾರಿ ನಿರ್ವಹಣೆಯಲ್ಲಿ ಲೋಪದೋಷ ಕಂಡು ಬರದಿರುವುದರಿಂದ ಸದರಿಯವರು ಕರ್ತವ್ಯ ನಿರ್ಲಕ್ಷತೆ ಹಾಗೂ ದುರ್ನಡತೆ ಆರೋಪಗಳಿಗಾಗಿ ದಿನಾಂಕ 28–3–2006 ರಂದು ನೋಟೀಸ್ ಜಾರಿ ಮಾಡಿ ಸಮಜಾಯಿಷಿ ಕೇಳಲಾಯಿತು. ಸದರಿಯವರು ದಿನಾಂಕ 5–5–2006ರಂದು ಪ್ರತಿ ಹೇಳಿಕೆ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ.

ಉಭಯ ಆರೋಪಿತರುಗಳ ಉತ್ತರಗಳನ್ನು ಪರಿಶೀಲಿಸಲಾಗಿ ಅವರ ಮೇಲಿನ ಆರೋಪಗಳ ಸತ್ಯಾಸತ್ಯತೆಯನ್ನು ವಿಚಾರಣೆಯ ಮೂಲಕ ಕಂಡುಕೊಳ್ಳುವುದು ಅತ್ಯಾವಶ್ಯಕವೆಂದು ಸರ್ಕಾರವು ತೀರ್ಮಾನಿಸಿ ಪ್ರಕರಣದ ಬಗ್ಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯವರನ್ನು ನೇಮಿಸಲು ತೀರ್ಮಾನಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 133 ಎಸ್ಇಎನ್ 2004, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಗಳು 1957ರ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ಮತ್ತು ನಿಯಂತ್ರಣ, ಮೇಲ್ಮನವಿ) ನಿಯಮಗಳು 1957ರ ನಿಯಮ 11(2)ರಲ್ಲಿ ಓದಿಕೊಂಡಂತೆ ಸರ್ಕಾರವು ಶ್ರೀ ಹೆಚ್. ಚಂದ್ರಶೇಖರಯ್ಯ ಹಾಗೂ ಶ್ರೀ ಎಸ್. ಕೃಷ್ಣಶೆಟ್ಟಿ, ನಿವೃತ್ತ ಮುಖ್ಯ ಇಂಜಿನಿಯರ್‌ಗಳು, ಇವರುಗಳ ವಿರುದ್ಧ ನೋಟೀಸಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಶ್ರೀ ಕೆದಿಲಾಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11(5)ರಡಿ ಕಾರ್ಯಪಾಲಕ ಅಭಿಯಂತರರು, ಕಬಿನಿ ಕಾಲುವೆ ವಿಭಾಗ, ಮೈಸೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣೆಯನ್ನು ಇನ್ನು 3 ತಿಂಗಳೊಳಗಾಗಿ ನಡೆಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಕಳುಹಿಸುವಂತೆ ತಿಳಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 40

**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು–3)

**ಕರ್ನಾಟಕ ಸರ್ಕಾರದ ಸಚಿವಾಲಯ**

**ಸಂಖ್ಯೆ: ಕಂಇ 231 ಸಮಿತಿ 2007, ಬೆಂಗಳೂರು, ದಿನಾಂಕ 1ನೇ ಜನವರಿ 2008**

**ಸುತ್ತೋಲೆ**

**ವಿಷಯ :** ಸಾರ್ವಜನಿಕ ಕುಂದುಕೊರತೆ ನಿವಾರಿಸಲು ಸೂಚನೆ.

ಕರ್ನಾಟಕ ರಾಜ್ಯದಲ್ಲಿ ಪ್ರಸ್ತುತ ರಾಷ್ಟ್ರಪತಿಗಳ ಆಡಳಿತ ಜಾರಿಯಲ್ಲಿದ್ದು, ಆಡಳಿತವು ಸುಗಮವಾಗಿ ನಡೆಯುವ ದಿಸೆಯಲ್ಲಿ ಘನತೆವೆತ್ತ ರಾಜ್ಯಪಾಲರಿಗೆ ಸಲಹೆಗಾರರು ನೇಮಕಗೊಂಡಿರುವುದು ಎಲ್ಲರಿಗೂ ತಿಳಿದಿರುವ ವಿಷಯವಾಗಿದೆ. ರಾಷ್ಟ್ರಪತಿಗಳ ಆಡಳಿತದಲ್ಲಿ ಅಂದರೆ ಚುನಾಯಿತ ಸರ್ಕಾರದ ಅನುಪಸ್ಥಿತಿಯಲ್ಲಿ ರಾಜ್ಯದ ಜನತೆಯ ಕುಂದುಕೊರತೆಗಳ ನಿವಾರಣೆಗೆ ಮತ್ತು ಸರ್ಕಾರದ ಕಾರ್ಯಕ್ರಮಗಳ ಅನುಷ್ಠಾನಕ್ಕೆ ಯಾವುದೇ ರೀತಿಯ ಅಡೆತಡೆಗಳು ಆಗಬಾರದೆಂಬುದು ಘನತೆವೆತ್ತ ರಾಜ್ಯಪಾಲರ ಆಶಯವಾಗಿದೆ. ಸದರಿ ಆಶಯಕ್ಕೆ ಪೂರಕವಾಗಿ ಕಾರ್ಯನಿರ್ವಹಿಸುವ ನಿಟ್ಟಿನಲ್ಲಿ ತಾಲ್ಲೂಕು, ಉಪ ವಿಭಾಗ ಮತ್ತು ಜಿಲ್ಲಾ ಮಟ್ಟದ ಕ್ಷೇತ್ರ ಅಧಿಕಾರಿಗಳ ಪಾತ್ರ ಪ್ರಮುಖವಾಗಿದೆ.

2. ಆದಕಾರಣ, ಪ್ರಸ್ತುತ ಚುನಾಯಿತ ಪ್ರತಿನಿಧಿಗಳು ಇಲ್ಲದಿರುವುದರಿಂದ ತಾಲ್ಲೂಕು, ಉಪ ವಿಭಾಗ ಮತ್ತು ಜಿಲ್ಲಾ ಮಟ್ಟದ ಕ್ಷೇತ್ರ ಅಧಿಕಾರಿಗಳು ಸಾರ್ವಜನಿಕ ಕುಂದುಕೊರತೆಗಳನ್ನು ಆಲಿಸುವ ಮತ್ತು ಅವುಗಳ ಬಗ್ಗೆ ಪರಿಹಾರಾತ್ಮಕ ಕ್ರಮ ಕೈಗೊಳ್ಳುವ ಬಗ್ಗೆ ಹೆಚ್ಚಿನ ಕ್ರಿಯಾಶೀಲರಾಗಿ ಕಾರ್ಯನಿರ್ವಹಿಸಬೇಕೆಂದು ಹಾಗೂ ಈ ಉದ್ದೇಶಕ್ಕಾಗಿ ಅವಶ್ಯವೆನಿಸಿದಲ್ಲಿ ಹೆಚ್ಚಿನ

ಸಮಯವನ್ನು ವಿನಿಯೋಗ ಮಾಡಿ ಸಾರ್ವಜನಿಕ ಕುಂದುಕೊರತೆಗಳನ್ನು ನಿವಾರಣೆ ಮಾಡಬೇಕೆಂದು ಈ ಮೂಲಕ ಕಟ್ಟುನಿಟ್ಟಿನ ಸೂಚನೆಯನ್ನು ನೀಡಲಾಗಿದೆ.

3. ತಾಲ್ಲೂಕು, ಉಪ ವಿಭಾಗ ಮತ್ತು ಜಿಲ್ಲಾ ಮಟ್ಟದ ಕ್ಷೇತ್ರ ಅಧಿಕಾರಿಗಳಿಂದ ನಿವಾರಿಸಬಹುದಾದ ಸಾರ್ವಜನಿಕ ಕುಂದುಕೊರತೆಗಳು ಸರ್ಕಾರದ ಹಂತದವರೆಗೂ ಬಾರದಂತೆ ಕ್ರಮ ವಹಿಸುವುದು. ಈ ನಿಟ್ಟಿನಲ್ಲಿ ವಿಫಲರಾದ ಅಧಿಕಾರಿಗಳ ಕಾರ್ಯನಿರ್ವಹಣೆಯನ್ನು ಗಂಭೀರವಾಗಿ ಪರಿಗಣಿಸಿ ಅವರ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಲಾಗುವುದು ಎಂದು ಸಹ ತಿಳಿಸಲಾಗಿದೆ.

4. ಜಿಲ್ಲಾ ಮಟ್ಟದ ಅಧಿಕಾರಿಗಳು, ತಮ್ಮ ಉಪ ವಿಭಾಗದ ಮತ್ತು ತಾಲ್ಲೂಕು ಮಟ್ಟದ ಅಧಿಕಾರಿಗಳಿಗೆ ಮೇಲೆ ತಿಳಿಸಿರುವಂತೆ ತ್ವರಿತ ಕ್ರಮ ಕೈಗೊಳ್ಳಲು ಸೂಚನೆ ನೀಡಬೇಕೆಂದು ನಿರ್ದೇಶಿಸಲಾಗಿದೆ.

**ಪ್ರಲ್ಹಾದ ಬಿ. ಮಹಿಷಿ**
ಸರ್ಕಾರದ ಮುಖ್ಯ ಕಾರ್ಯದರ್ಶಿ,

**KARNATAKA GOVERNMENT SECRETARIAT**

**No. RD 231 SAMITHI 2007, Bangalore, dated: 1th January 2008.**

**CIRCULAR**

**Sub :** Instruction to redressal of public grievances –reg.

It is a known fact that, at present, President's Rule is in force in the State of Karnataka and Advisors to His Excellency the Governor are appointed to have smooth administration. His Excellency the Governor wishes that in the President's Rule in other words in the absence of an elected Government, there should not be any problem in redressing public grievances and implementation of programmes of the State. In fulfilling the wishes of His Excellency, the role of the field Officers at Taluk, Sub-division and District levels is very important.

2. Therefore, strict instructions are hereby given that since the elected representatives are not in place, the field level officers at Taluk, Sub-division and District levels shall be more active in hearing public representations/grievances and taking remedial action thereto. They shall also devote more time to redressal of the public grievances.

3. The field Officers at Taluk, Sub-division and District levels should see that no public representation/ grievance considerable at their level would not come to Government. It is also informed what performance of such officers who fail in this direction will be viewed seriously and suitable action will be taken againt them.

4. District level officers are directed to give instructions to their Sub-divisional and Taluka level officers to take immediate action as indicated above.

**PRALHAD B. MAHISHI**
PR. 44 Chief Secretary to Government

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಬಾಬು, ಎ.ಎಸ್.ಐ. ಚಿಂಚೋಳಿ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ರವರನ್ನು ಕರ್ತವ್ಯಕ್ಕೆ ಪುನರ್ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾರವರ ಆದೇಶ ಸಂಖ್ಯೆ: ಡಿಇ/1/84–85, ದಿನಾಂಕ 05–05–2004.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 21–12–2004.
3) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ: ಅಪೀಲು/2/9/2005, ದಿನಾಂಕ:28–06–2005.

**ಪ್ರಸ್ತಾವನೆ:**

ಗುಲ್ಬರ್ಗಾ ಅಶೋಕನಗರ ಪೊಲೀಸ್ ಠಾಣೆಯಲ್ಲಿ ಶ್ರೀ ಬಾಬು, ಎ.ಎಸ್.ಐ. ಮತ್ತಿತರರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ:37/84 ಅನ್ನು ದಾಖಲಿಸಲಾಗಿತ್ತು. ಈ ಪ್ರಕರಣದಲ್ಲಿ ಶ್ರೀ.ಬಾಬು ಶಿವರಾಯಪ್ಪ ಹಾಗೂ ಇತರೆ ಆರೋಪಿಗಳಿಗೆ ನ್ಯಾಯಾಲಯವು 3 ವರ್ಷಗಳ ಕಠಿಣ ಶಿಕ್ಷೆ ಮತ್ತು ರೂ.5,000/– ಗಳ ದಂಡವನ್ನು ವಿಧಿಸಿ ಆದೇಶ ಹೊರಡಿಸಿದ್ದನ್ನು ಪರಿಗಣಿಸಿ ಮೇಲೆ (1) ರಲ್ಲಿ ಓದಲಾದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ಶ್ರೀ ಬಾಬು ಶಿವರಾಯಪ್ಪ ಇವರನ್ನು ಸೇವೆಯಿಂದ ವಜಾಮಾಡಿ, ದಿನಾಂಕ 07–04–1984 ರಿಂದ 08–02–1986ರವರೆಗಿನ ಅಮಾನತ್ತಿನ ಅವಧಿನ್ನು ಅಮಾನತ್ತೆಂದೇ ಪರಿಗಣಿಸಿ ಆದೇಶ ಹೊರಡಿಸಿರುತ್ತಾರೆ.

ಈ ಆದೇಶದ ವಿರುದ್ಧ ಶ್ರೀ.ಬಾಬು ಇವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 3148 ಮತ್ತು 3149/2004 ಹೂಡಿದ್ದು, ಆಡಳಿತ ನ್ಯಾಯ ಮಂಡಳಿಯು ದಿನಾಂಕ 28–05–2004 ರಂದು ತೀರ್ಪು ನೀಡಿ ಅರ್ಜಿದಾರರನ್ನು 28–05–2004ರ ಮಧ್ಯಾಹ್ನ 2 ಘಂಟೆಯೊಳಗಾಗಿ ವಜಾಮಾಡದಿದ್ದರೆ ಯಥಾ ಸ್ಥಿತಿಯಲ್ಲಿ ಮುಂದುವರೆಸಬಹುದೆಂದು ಆದೇಶ ನೀಡಿರುತ್ತದೆ. ಆದರೆ ದಿನಾಂಕ 28–05–2004 ಕ್ಕಿಂತ ಮುಂಚಿತವಾಗಿಯೇ ಶ್ರೀ.ಬಾಬು ಶಿವರಾಯಪ್ಪ ಇವರಿಗೆ ವಜಾ ಆದೇಶವನ್ನು ಜಾರಿ ಮಾಡಿರುವುದರಿಂದ ಸದರಿಯವರನ್ನು ಸೇವೆಯಲ್ಲಿ ಮುಂದುವರೆಸಲು ಸಾಧ್ಯವಿಲ್ಲವೆಂದು ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರು ತಿಳಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಹಾಗೂ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ನ್ಯಾಯಾಲಯವು ಶಿಕ್ಷೆ ವಿಧಿಸಿರುವುದರಿಂದ ಇವರನ್ನು ಸೇವೆಯಿಂದ ವಜಾಮಾಡಲಾಗಿದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 16 ಪೊಸಿಅ 2007 ಬೆಂಗಳೂರು, ದಿನಾಂಕ: 30ನೇ ನವೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಾಬು, ಎ.ಎಸ್.ಐ. ಚಿಂಚೋಳಿ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2136

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಫ್.ಎ. ಟ್ರಾಸ್ಗರ್, ಡಿವೈ.ಎಸ್.ಪಿ. ರವರ ವಿರುದ್ಧದ ಇಲಾಖಾ ವಿಚಾರಣೆಯ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ.ಒಇ 23 ಪೊಸಿಪ 2007 ದಿನಾಂಕ 14–06–2007.
2. ಸರ್ಕಾರದ ಆದೇಶ ಸಂಖ್ಯೆ.ಒಇ 23 ಪೊಸಿಪ 2007 ದಿನಾಂಕ 13–09–2007
3. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ(5)22/2006–07 ದಿನಾಂಕ 14–11–2007.

**ಪ್ರಸ್ತಾವನೆ:**

ಶ್ರೀ ಎಫ್.ಎ. ಟ್ರಾಸ್ಗರ್, ಡಿವೈ.ಎಸ್.ಪಿ. ರವರ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮಗಳು, 1965/89 ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆದೇಶಿಸಲಾಗಿದ್ದು, ಎಸ್.ಪಿ, ಚಿತ್ರದುರ್ಗ ಜಿಲ್ಲೆ ರವರನ್ನು ವಿಶೇಷ ಅಧಿಕಾರಹೊಂದಿದ ವಿಚಾರಣಾಧಿಕಾರಿಯನ್ನಾಗಿ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ನೇಮಿಸಲಾಗಿದ್ದು, ಈ ಕೆಳಕಂಡ ದೋಷಾರೋಪಣೆಯನ್ನು ಜಾರಿಗೊಳಿಸಲಾಗಿತ್ತು.

**ದೋಷಾರೋಪಣೆ:**

"ಶ್ರೀ ರಾಮಸಿರೋಮಣಿ ಉರುಫ್ ರಮಣಿ ನಿಹಾರ್ ಯಾದವ ಸಾ: ವಾಸ್ಕೋಡಿಗಾಮಾ, ಗೋವಾ ಇವರ ಪ್ರಕರಣ ಅಂತರ ರಾಜ್ಯಕ್ಕೆ ಸಂಬಂಧಪಟ್ಟಿದ್ದರ ಪ್ರಯುಕ್ತ ಅವರ ಆಯುಧ ವಿಚಾರಣೆಗಾಗಿ ಪೊಲೀಸ್ ಠಾಣೆಗೆ ತರುವ ಪೂರ್ವದಲ್ಲಿ ಮೇಲಾಧಿಕಾರಿಗಳಿಂದ ಅನುಮತಿ ಪಡೆದುಕೊಳ್ಳಬೇಕಾಗಿತ್ತು.

ಪಿಸ್ತೂಲ ಸಂ: 323305ನ್ನು ವಾಸ್ಕೋ ಪೊಲೀಸ್ ಠಾಣೆ ಅಪರಾಧ 173/98 ಕಲಂ 324, 506(II) ಸ.ಕ. 34 ಐಪಿಸಿ ಪ್ರಕಾರ ದಾಖಲಾದ ಪ್ರಕರಣದಲ್ಲಿ ಆಯುಧ ಠೇವಣಿ ಮಾಡಿಕೊಂಡ ನಂತರ ಶಸ್ತ್ರಾಸ್ತ್ರಗಳ ಅಧಿನಿಯಮ 21(1)ರ ಪ್ರಕಾರ ಹಾಗೂ ಕರ್ನಾಟಕ ರಾಜ್ಯ ಪೊಲೀಸ್ ಆದೇಶ ಕ್ರಮಾಂಕ 943, 946(3)ರ ಪ್ರಕಾರ ಠೇವಣಿ ಮಾಡಿಕೊಂಡು, ಜಿಲ್ಲಾ ಆಯುಧ ಸಂಗ್ರಹಕ್ಕೆ ಕಳುಹಿಸಿ, ಸ್ವೀಕೃತಿ ಪತ್ರ ಪಡೆದುಕೊಂಡಿರುವುದಿಲ್ಲ ಹಾಗೂ ಪೊಲೀಸ್ ಠಾಣೆ ದಾಖಲಾತಿ ಪುಸ್ತಕಗಳಲ್ಲಿ ನಿರ್ವಹಿಸಿಕೊಂಡು ಬಂದಿರುವುದಿಲ್ಲ.

ದಿನಾಂಕ: 08–08–1998ರಂದು ವಾಸ್ಕೊ ಪೊಲೀಸ್ ಠಾಣೆ ಅಪರಾಧ ಸಂಖ್ಯೆ: 173/98 ಕಲಂ 324, 506(II) ಸ.ಕ. 34 ಐಪಿಸಿ ಪ್ರಕಾರ ದಾಖಲಾದ ಪ್ರಕರಣದಲ್ಲಿ ಪಿಸ್ತೂಲ್ ನಂ: 323305ನ್ನು ಪರೇಶ ಗನ್ ಶಾಪ್, ಖಡೇಬಜಾರ, ಬೆಳಗಾವಿ ಇವರಿಂದ ವಶಪಡಿಸಿಕೊಂಡ ನಂತರ ಆಯುಧ ಅನುಜ್ಞಾ ಪತ್ರ ಪ್ರಾಧಿಕಾರಿಗಳಾದ ಜಿಲ್ಲಾ ದಂಡಾಧಿಕಾರಿ, ಗೋವಾ ರಾಜ್ಯ ಇವರಿಗೆ ತಿಳಿಸಲು ಮೇಲಾಧಿಕಾರಿಗಳಿಗೆ ವರದಿ ಕಳುಹಿಸಿರುವುದಿಲ್ಲ.

ನೀವು ಮಾರ್ಕೆಟ್ ಪೊಲೀಸ್ ಠಾಣೆಯಿಂದ ವರ್ಗವಾದ ನಂತರ ಶ್ರೀ ಪಿ.ಜಿ. ವಾಂಡಕರ, ಪಿಐ ರವರಿಗೆ ದಿನಾಂಕ: 01-07-2001ರಂದು ಪೊಲೀಸ್ ಠಾಣೆಯ ಪ್ರಭಾರವನ್ನು ವಹಿಸಿಕೊಡುವಾಗ ಪ್ರಭಾರ ಪಟ್ಟಿಯಲ್ಲಿ ಸದರಿ ಪಿಸ್ತೂಲ ನಂ: 323305 ರ ಬಗ್ಗೆ ನಮೂದಿಸಿರುವುದಿಲ್ಲ."

ಡಿಜಿ ಮತ್ತು ಐಜಿಪಿ ರವರು ಮೇಲೆ ಓದಲಾದ (3) ರ ಪತ್ರದಲ್ಲಿ ಶ್ರೀ ಎಫ್.ಎ. ಟ್ರಾಸ್ಗರ್, ಡಿವೈ.ಎಸ್.ಪಿ. ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಇಲಾಖಾ ವಿಚಾರಣಾಧಿಕಾರಿಗಳು ಹಾಗೂ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಜಿಲ್ಲೆ ಇವರು ಸಲ್ಲಿಸಿರುವ ಅಂತಿಮ ವರದಿಯನ್ನು ಸರ್ಕಾರಕ್ಕೆ ಕಳುಹಿಸಿದ್ದು, ಆರೋಪಿತ ಪೊಲೀಸ್ ಅಧಿಕಾರಿಯವರ ವಿರುದ್ಧ ಹೊರಿಸಲಾದ ಆರೋಪಗಳು ಸಾಬಿತಾಗಿರುವುದಿಲ್ಲವೆಂದು ನೀಡಿರುವ ವಿಚಾರಣಾಧಿಕಾರಿಯವರ ಅಭಿಪ್ರಾಯವನ್ನು ಅನುಮೋದಿಸಿ ಅಂತಿಮ ಆದೇಶ ಹೊರಡಿಸಲು ಸರ್ಕಾರವನ್ನು ಕೋರಿರುತ್ತಾರೆ.

ಇಲಾಖಾ ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯಲ್ಲಿ ಅಭಿಯೋಗದ ಪರವಾಗಿ 6 ಸಾಕ್ಷಿಗಳು ರಕ್ಷಣಾ ಪರವಾಗಿ 2 ಸಾಕ್ಷಿದಾರರ ಹೇಳಿಕೆಗಳನ್ನು ಪಡೆದಿರುತ್ತಾರೆ. ಹಾಗೂ ವಿಚಾರಣೆಯನ್ನು ನಡೆಸಿರುತ್ತಾರೆ. ಈ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿದ್ದು, ದಾಖಲಾತಿ ಕಡತಗಳನ್ನು ಒದಗಿಸಿರುತ್ತಾರೆ. ಇಲಾಖಾ ವಿಚಾರಣಾಧಿಕಾರಿಗಳು ತಮ್ಮ ಅಂತಿಮ ವರದಿಯಲ್ಲಿ ಶ್ರೀ.ಎಫ್.ಎ.ಟ್ರಾಸ್ಗರ್ ಈ ಹಿಂದೆ ಮಾರ್ಕೆಟ್ ಪೊಲೀಸ್ ಠಾಣೆ, ಬೆಳಗಾಂ ಜಿಲ್ಲೆಯಲ್ಲಿ ಪಿ.ಐ. ಆಗಿ ಕರ್ತವ್ಯನಿರ್ವಹಿಸುತ್ತಿದ್ದಾಗ ಅರ್ಜಿದಾರ ಶ್ರೀ.ರಾಮಸಿರೋಮಣಿ ಉರ್ಫ್ ರಮಣಿ ನಿಹಾರ ಯಾದವ ಸಾ:ವಾಸ್ಕೋಡಿಗಾಮಾ, ಗೋವಾ ಇವರ ಪಿಸ್ತೂಲ್ ನ: 323305ನ್ನು ಪೊಲೀಸ್ ಠಾಣೆಯ ಭದ್ರತೆಯಲ್ಲಿ ಇಡದೇ, ಲೋಪದೋಷಗಳನ್ನು ಎಸಗಿರುತ್ತಾರೆ ಎಂದು ಆಪಾದಿಸಿರುವ ಆಪಾದನೆಗಳಲ್ಲಿ ಯಾವುದೇ ಹುರುಳಿಲ್ಲವೆಂದೂ, ಆ.ಪೊ.ಅ ರವರು ಪಿಸ್ತೂಲನ್ನು ಕೇವಲ verify ಮಾಡಿರುವರು ಎಂಬುದು ಸಾಬೀತಾಗಿದ್ದು, ಒಂದು ವೇಳೆ ಅಮಾನತ್ತುಪಡಿಸಿಕೊಂಡಿದ್ದರೆ, ಮುಂದಿನ ಕ್ರಮವನ್ನು ಜರುಗಿಸುತ್ತಿದ್ದರು. ಅಮಾನತ್ತುಪಡಿಸಿಲ್ಲವೆಂದು ತಿಳಿದುಬಂದ ಮೇಲೆ ಮುಂದಿನ ಕ್ರಮದ ಅವಶ್ಯಕತೆ ಇರುವುದಿಲ್ಲ. ಹಾಗಾಗಿ ಇವರು ತಮ್ಮ ಅಂತಿಮ ಹೇಳಿಕೆಯಲ್ಲಿ ನಿವೇದಿಸಿಕೊಂಡಿರುವಂತೆ ಕಾಣೆಯಾದ ಪಿಸ್ತೂಲ್‌ನ ಬಗ್ಗೆ ಮುತುವರ್ಜಿ ವಹಿಸದೆ ಕೇವಲ ಯಾವುದೋ ಒಂದು ಹೇಳಿಕೆಯಿಂದ ಆಪಾದನೆಗಳನ್ನು ಮಾಡಿರುವುದು ಕಂಡು ಬಂದಿದ್ದು, ಆ.ಪೊ.ಅಧಿಕಾರಿ ಮೇಲೆ ಹೊರಿಸಿರುವ ಆಪಾದನೆಗಳು ಸಾಬೀತಾಗಿರುವುದಿಲ್ಲವೆಂದೂ ಅಭಿಪ್ರಾಯ ಪಟ್ಟಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ.ಒಇ 23 ಪೊಸಿಪ 2007, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಹಾಗೂ ಇಲಾಖಾ ವಿಚಾರಣಾ ಅಂತಿಮ ವರದಿಯನ್ನು ಪರಿಶೀಲಿಸಿ ಶ್ರೀ ಎಫ್.ಎ. ಟ್ರಾಸ್ಗರ್, ಡಿವೈ.ಎಸ್.ಪಿ (ಸಿವಿಲ್) ಇವರನ್ನು ಇಲಾಖಾ ವಿಚಾರಣೆಯ ದೋಷಾರೋಪಣೆಯಿಂದ ದೋಷಮುಕ್ತಗೊಳಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.2127

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಡಿ.ಕೊಟ್ರೂರಪ್ಪ, ಎ.ಎಸ್.ಐ (ನಿವೃತ್ತ) ಶಿವಮೊಗ್ಗ ಜಿಲ್ಲೆ ರವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಅಪೀಲು(6) 73/2004-05 ದಿನಾಂಕ 18-03-2006.
2) ಸರ್ಕಾರದ ಆದೇಶ ಸಂಖ್ಯೆ:ಒಇ 88 ಪೊಸಇ 2006 ದಿನಾಂಕ 20-05-2006.
3) ಲೋಕಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ/140/ಸಿಎನ್‌ಎಸ್/07, ದಿನಾಂಕ 15-11-2007.

**ಪ್ರಸ್ತಾವನೆ:**

ಶ್ರೀ ಕೊಟ್ರೂರಪ್ಪ, ಎ.ಎಸ್.ಐ (ಹಾಲಿ ನಿವೃತ್ತ) ಶಿವಮೊಗ್ಗ ಜಿಲ್ಲೆ ರವರು ತಮ್ಮ ಮೊದಲನೇ ಪತ್ನಿ ಶ್ರೀಮತಿ ವೆಂಕಟಲಕ್ಷಮ್ಮ ಜೀವಂತ ಇರುವಾಗಲೇ ಶ್ರೀಮತಿ ಸುಶೀಲಮ್ಮ ಎಂಬುವವರನ್ನು ಮದುವೆ ಮಾಡಿಕೊಂಡಿರುವುದು, ಪಿ.ಐ, ಡಿ.ಎಸ್.ಐ.ಬಿ., ಡಿ.ಪಿ.ಓ. ಶಿವಮೊಗ್ಗ ರವರು ನಿರ್ವಹಿಸಿರುವ ಪೂರ್ವಭಾವಿ ವಿಚಾರಣಾ ವರದಿ ದಿನಾಂಕ 28-01-2006ರ ಮೇರೆಗೆ ಧೃಢಪಟ್ಟಿರುತ್ತದೆ. ಸದರಿಯವರು ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಾವಳಿ, 1966ರ ನಿಯಮ 28ನ್ನು ಉಲ್ಲಂಘಿಸಿರುವುದರಿಂದ ಹಾಗೂ ಸದರಿಯವರು ದಿನಾಂಕ 31-03-2005 ರಂದು ವಯೋ ನಿವೃತ್ತಿ ಹೊಂದಿರುವುದರಿಂದ ಇವರ ವಿರುದ್ಧ ಕೆ.ಸಿ.ಎಸ್.ಆರ್. ನಿಯಮಾವಳಿಗಳ ನಿಯಮ 214(ಬಿ)(1)ರ ಪ್ರಕಾರ ಇಲಾಖಾ ವಿಚಾರಣೆಯನ್ನು ಆದೇಶಿಸಲು ಮತ್ತು ಡಿವೈ.ಎಸ್.ಪಿ (ಡಿ.ಇ) ಪೂರ್ವವಲಯ ಕಛೇರಿ, ದಾವಣಗೆರೆ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಮೇಲೆ ಓದಲಾದ(1)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ ರವರು ಸರ್ಕಾರವನ್ನು ಕೋರಿರುತ್ತಾರೆ. ಈ ಬಗ್ಗೆ ಪರಿಶೀಲಿಸಿ ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಡಿವೈ.ಎಸ್.ಪಿ (ಡಿಇ) ಪೂರ್ವವಲಯ ಕಛೇರಿ, ದಾವಣಗೆರೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಪೂರ್ಣಗೊಳಿಸಿ ವರದಿಯನ್ನು ಸಲ್ಲಿಸಿದ್ದು, ಮೊದಲನೆಯ ಪತ್ನಿ ಜೀವಂತ ಇರುವಾಗಲೇ ಸ್ವಇಚ್ಛೆಯಿಂದ ಎರಡನೇ ಮದುವೆಯಾಗಿರುವುದು ದೃಢಪಟ್ಟಿದೆಯೆಂದು ವರದಿ ಮಾಡಿರುತ್ತಾರೆ. ಈ ಬಗ್ಗೆ ಆಪಾದಿತ ಅಧಿಕಾರಿಗೆ ಕಾರಣ ಕೇಳುವ ನೋಟೀಸ್‌ನ್ನು ಜಾರಿ ಮಾಡಲಾಗಿತ್ತು. ಸದರಿಯವರು ತಾನು ಎರಡನೇ ಮದುವೆಯಾಗಿರುವುದು ಕಾನೂನು ರೀತಿ ತಪ್ಪಾಗಿದೆ. ಆದರೆ ಮಾನವೀಯತೆಯ ದೃಷ್ಟಿಯಿಂದ ತನ್ನ ನಿಧನದ ನಂತರ ಇಬ್ಬರು ಹೆಂಡತಿಯರಿಗೂ ವಿಶ್ರಾಂತಿ ವೇತನವನ್ನು ನೀಡಬೇಕೆಂದು ತಮ್ಮ ಸಮಜಾಯಿಷಿಯಲ್ಲಿ ಕೋರಿರುತ್ತಾರೆ.

ಸಮಜಾಯಿಷಿಯಲ್ಲಿ ಪರಿಶೀಲಿಸಬಹುದಾದ ಯಾವುದೇ ಅಂಶಗಳು ಇಲ್ಲದಿರುವುದರಿಂದ ಸದರಿ ನಿವೃತ್ತ ಅಧಿಕಾರಿಯವರಿಗೆ ದಂಡನೆಯನ್ನು ವಿಧಿಸಲು ನಿರ್ಧರಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಮೇಲೆ(3)ರಲ್ಲಿ ಓದಲಾದ ಪತ್ರದಲ್ಲಿ ಪಡೆಯಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 88 ಪೊಸಇ 2006, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶ್ರೀ ಡಿ. ಕೊಟ್ಟೂರಪ್ಪ, ಎ.ಎಸ್.ಐ (ನಿವೃತ್ತ) ಶಿವಮೊಗ್ಗ ಜಿಲ್ಲೆ ರವರು ಕರ್ನಾಟಕ ನಾಗರೀಕ ಸೇವಾ (ವರ್ತನೆ) ನಿಯಮಾವಳಿ, 1966ರ ನಿಯಮ 28ನ್ನು ಉಲ್ಲಂಘಿಸಿರುವುದರಿಂದ ಸದರಿಯವರ ನಿವೃತ್ತಿ ವೇತನದಿಂದ 1/3 ಭಾಗವನ್ನು 5 ವರ್ಷಗಳ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2182

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಸಿದ್ದಾಪುರ ಪೊಲೀಸ್ ಠಾಣೆಯಲ್ಲಿ ದಿನಾಂಕ 12–04–2004 ರಂದು ನಡೆದ ಪ್ರಕರಣಕ್ಕೆ ಸಂಬಂಧಿಸಿದಂತೆ ಸಂಬಂಧಪಟ್ಟ ಪೊಲೀಸ್ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಕುರಿತು ವಿಚಾರಣಾಧಿಕಾರಿಯನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಒಇ 107 ಪೊಸಿಪ 2004 ದಿನಾಂಕ 15–04–2004 ದಿನಾಂಕ 05–06–2006.
2. ಡಿಜಿ ಹಾಗೂ ಐಜಿಪಿರವರ ಪತ್ರ ಸಂಖ್ಯೆ:ಅಪೀಲು(7)7/2004–2005 ದಿನಾಂಕ 11–04–2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಕೆ.ಎಸ್.ಪಿ(ಡಿ.ಪಿ) ನಿಯಮಗಳು 1965ರ ನಿಯಮ 6 ಮತ್ತು 8ರನ್ವಯ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಲಾಗಿದೆ.

**ಶ್ರೀಯುತರು:**

1) ಶ್ರೀ ಸುರೇಶ್ ನಾಯ್ಡು, ಎ.ಸಿ.ಪಿ
2) ಶ್ರೀ ಟಿ. ರಾಮಯ್ಯ, ಪಿ.ಐ

ಈ ವಿಚಾರಣೆಯನ್ನು ನಡೆಸಲು ಜಂಟಿ ಪೊಲೀಸ್ ಆಯುಕ್ತರು, (ಆಡಳಿತ) ಬೆಂಗಳೂರು ನಗರ ರವರನ್ನು ವಿಶೇಷ ಅಧಿಕಾರಹೊಂದಿದ ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು. ದಿನಾಂಕ 05–06–2006ರ ಸರ್ಕಾರದ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆಯಿಂದ ಮೃತರಾಗಿರುವ ಶ್ರೀ ಸುರೇಶ್‌ನಾಯ್ಡು, ಡಿವೈ.ಎಸ್.ಪಿ. ಇವರ ಹೆಸರನ್ನು ಕೈಬಿಡಲಾಗಿದೆ.

ಶ್ರೀ ಟಿ. ರಾಮಯ್ಯ, ಪಿ.ಐ. ರವರ ವಿರುದ್ಧ ಇರುವ ಇಲಾಖಾ ವಿಚಾರಣೆಯಲ್ಲಿ ಜಂಟಿ ಪೊಲೀಸ್ ಆಯುಕ್ತರು, ಆಡಳಿತ, ಬೆಂಗಳೂರು ನಗರ ರವರ ಬದಲಿಗೆ ಶ್ರೀ ಎನ್.ಎಸ್. ಮೇಘರೀಕ್, ಹೆಚ್ಚುವರಿ ಪೊಲೀಸ್ ಆಯುಕ್ತರು, ಸಿ.ಎ.ಆರ್., ಬೆಂಗಳೂರು ನಗರ ರವರನ್ನು ವಿಚಾರಣಾಧಿಕಾರಿಯಾಗಿ ನೇಮಿಸುವಂತೆ, ಮೇಲೆ ಓದಲಾದ (2)ರ ಪತ್ರದಲ್ಲಿ ಡಿಜಿ ಮತ್ತು ಐಜಿಪಿ, ಬೆಂಗಳೂರು ರವರು ಸರ್ಕಾರಕ್ಕೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 107 ಪೊಸಿಪ 2004 ಬೆಂಗಳೂರು, ದಿನಾಂಕ: 29ನೇ ನವೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಈಗಾಗಲೇ ಹೊರಡಿಸಿರುವ ಸರ್ಕಾರದ ಇದೇ ಸಮ ಸಂಖ್ಯೆಯ ಆದೇಶ ದಿನಾಂಕ 15–04–2004ನ್ನು ಭಾಗಶ: ಮಾರ್ಪಡಿಸಿ, ಜಂಟಿ ಪೊಲೀಸ್ ಆಯುಕ್ತರು, ಆಡಳಿತ, ಬೆಂಗಳೂರು ನಗರ ರವರ ಬದಲಿಗೆ ಶ್ರೀ ಎನ್.ಎಸ್. ಮೇಘರೀಕ್, ಹೆಚ್ಚುವರಿ ಪೊಲೀಸ್ ಆಯುಕ್ತರು, ಸಿ.ಎ.ಆರ್., ಬೆಂಗಳೂರು ನಗರ ರವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿದೆ.

ದಿನಾಂಕ 15–04–2004ರ ಆದೇಶದಲ್ಲಿ ಉಳಿದ ಇತರ ಅಂಶಗಳ ಬಗೆಗಿನ ಆದೇಶಗಳು ಯಥಾವತ್ತಾಗಿ ಮುಂದುವರಿಯುತ್ತವೆ. ಈ ವಿಚಾರಣೆಯನ್ನು ಎರಡು ತಿಂಗಳ ಒಳಗೆ ಮುಗಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2121

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ :** ಬೆಳಗಾಂ ಜಿಲ್ಲಾ ಶಸ್ತ್ರಾಲಯದಲ್ಲಿ ಸಶಸ್ತ್ರಗಳು ಕಳುವು ಆಗಿರುವ ಬಗ್ಗೆ ಶ್ರೀ ಕೆ.ಜಿ. ಶೇಷಗಿರಿರಾವ್, ನಿವೃತ್ತ ಎಸ್.ಪಿ. ಹಾಗೂ ಇತರರ ವಿರುದ್ಧ ಜಂಟಿ ಇಲಾಖಾ ವಿಚಾರಣೆಯಲ್ಲಿ ವಿಚಾರಣಾಧಿಕಾರಿಯನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ ಒಇ 282 ಪೊಸಿಪ 2003, ದಿನಾಂಕ 14-8-2007.
2. ಡಿಜಿ ಹಾಗೂ ಐಜಿಪಿರವರ ಪತ್ರ ಸಂಖ್ಯೆ: ಸಿಬಿ:5:9:2002-2003 ದಿನಾಂಕ 1-10-2007.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಕೆ.ಸಿ.ಎಸ್.ಆರ್. ನಿಯಮ 214 ಹಾಗೂ ಕೆ.ಎಸ್.ಪಿ(ಡಿ.ಪಿ) ನಿಯಮಗಳು 1965ರ ನಿಯಮ 6 ಮತ್ತು 8ರನ್ವಯ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಲಾಗಿದೆ.

**ಶ್ರೀಯುತರು:**

1. ಶ್ರೀ ಕೆ.ಜಿ. ಶೇಷಗಿರಿರಾವ್, ನಿವೃತ್ತ ಎಸ್.ಪಿ (ಸಶಸ್ತ್ರ)
2. ಶ್ರೀ ಸಿ. ಪರಶುರಾಮ ರಾವ್, ನಿವೃತ್ತ ಆರ್.ಪಿ.ಐ.
3. ಶ್ರೀ ಟಿ.ಕೆ. ಮೇಘರಾಜ್, ನಿವೃತ್ತ ಡಿವೈ.ಎಸ್.ಪಿ (ಸಶಸ್ತ್ರ)
4. ಶ್ರೀ ಎಸ್.ಕೆ. ಕೊಲೂರ್, ಆರ್.ಪಿ.ಐ. ಡಿ.ಎ.ಆರ್. ಹುಬ್ಬಳ್ಳಿ-ಧಾರವಾಡ ನಗರ.
5. ಶ್ರೀ ಎಸ್.ಐ. ಬ್ಯೆಯರ್, ಆರ್.ಪಿ.ಐ. ಡಿ.ಎ.ಆರ್. ಧಾರವಾಡ.
6. ಶ್ರೀ ಬಿ.ಎ. ಹೂಲಿ, ಆರ್.ಪಿ.ಐ. ಸಿ.ಎ.ಆರ್ (ದಕ್ಷಿಣ) ಬೆಂಗಳೂರು ನಗರ.
7. ಶ್ರೀ ಎಸ್.ಜಿ. ಚನ್ನಬಸಪ್ಪ, ಆರ್.ಪಿ.ಐ. ಡಿ.ಎ.ಆರ್, ಬೆಳಗಾಂ
8. ಶ್ರೀ ಎಂ.ಎಂ. ಬ್ಯೆಹಟ್ಟಿ, ಡಿವೈ.ಎಸ್.ಪಿ. ಸಶಸ್ತ್ರ, ಪಿ.ಟಿ.ಎಸ್, ಯಲಹಂಕ, ಬೆಂಗಳೂರು.
9. ಶ್ರೀ ಹೆಚ್.ಪಿ. ಜೋಸೆಫ್, ಆರ್.ಪಿ.ಐ. ಸಿ.ಎ.ಆರ್ (ಕೇಂದ್ರ) ಬೆಂಗಳೂರು
10. ಶ್ರೀ ಎಸ್.ವಿ. ಯಾದವ್, ಆರ್.ಪಿ.ಐ, ಡಿ.ಎ.ಆರ್, ಬೆಂಗಳೂರು.
11. ಶ್ರೀ ಎಸ್.ಎನ್. ಕುಂದರಗಿ, ಎ.ಹೆಚ್.ಸಿ. 221 ಅರ್ಮೋರರ್, ಡಿ.ಎ.ಆರ್, ಬೆಳಗಾಂ (ಅಮಾನತ್ತಿನಲ್ಲಿರುವ).

ಈ ವಿಚಾರಣೆಯನ್ನು ನಡೆಸಲು ನಿರ್ದೇಶಕರು, ಕೆ.ಪಿ.ಎ., ಮೈಸೂರು ಇವರನ್ನು ವಿಶೇಷ ಅಧಿಕಾರಹೊಂದಿದ ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ನಿರ್ದೇಶಕರು, ಕೆ.ಪಿ.ಎ., ಮೈಸೂರು ರವರ ಪತ್ರ ಸಂಖ್ಯೆ: ಸಿಬಿ/ಡಿಇ/1/2007-08, ದಿನಾಂಕ 19-9-2007ರ ಪತ್ರದಲ್ಲಿ ಅವರು ಈ ಹಿಂದೆ ಐ.ಜಿ.ಪಿ. ಆಗಿ ಉತ್ತರವಲಯ, ಬೆಳಗಾವಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸದರಿ ಪ್ರಕರಣದ ಪೂರ್ವಭಾವಿ ವಿಚಾರಣೆ ನಡೆಸುವಂತೆ ಸೂಚನೆ ನೀಡಿ ಸದರಿ ಪೂರ್ವಭಾವಿ ವಿಚಾರಣಾ ವರದಿಯನ್ನು ಅನುಮೋದಿಸುತ್ತಾ ಸಂಬಂಧಪಟ್ಟವರ ವಿರುದ್ಧ ಸೂಕ್ತ ಶಿಸ್ತಿನ ಕ್ರಮವನ್ನು ಜರುಗಿಸುವಂತೆ ಕೋರಿ ದಿನಾಂಕ 6-5-2003ರಲ್ಲಿ ಪ್ರಧಾನ ಕಛೇರಿಗೆ ವಿವರವಾದ ವರದಿಯನ್ನು ಸಲ್ಲಿಸಿರುತ್ತಾರೆಂದು ಹಾಗೂ ಈ ವಿಚಾರಣೆಯಲ್ಲಿ ಅಭಿಯೋಗದ ಸಾಕ್ಷಿಯಾಗಬಹುದಾದ ಕಾರಣ ತಾನು ವಿಚಾರಣೆಯನ್ನು ನಡೆಸುವುದು ಸ್ವಾಭಾವಿಕ ನ್ಯಾಯಕ್ಕೆ ವಿರುದ್ಧವಾಗಬಹುದು ಮತ್ತು ಆರೋಪಿತ ಪೊಲೀಸ್ ಅಧಿಕಾರಿಗಳು ಆಕ್ಷೇಪಿಸಬಹುದಾಗಿರುತ್ತದೆಂದು ತಿಳಿಸಿ ಸದರಿ ಇಲಾಖಾ ವಿಚಾರಣೆಯನ್ನು ನಡೆಸಲು ಬೇರೆ ಯಾರನ್ನಾದರೂ ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಕೋರಿರುತ್ತಾರೆಂದು ಮೇಲೆ ಓದಲಾದ (2)ರ ಪತ್ರದಲ್ಲಿ ಡಿಜಿ ರವರು ಸದರಿ ಪ್ರಕರಣದಲ್ಲಿ ಐ.ಜಿ.ಪಿ. ತರಬೇತಿ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಸರ್ಕಾರಕ್ಕೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 282 ಪೊಸಿಪ 2003 ಬೆಂಗಳೂರು, ದಿನಾಂಕ: 29ನೇ ನವೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರದ ದಿನಾಂಕ 14-8-2007ರ ಆದೇಶವನ್ನು ಭಾಗಶಃ ಮಾರ್ಪಡಿಸಿ ನಿರ್ದೇಶಕರು, ಕೆ.ಪಿ.ಎ., ಮೈಸೂರು ರವರ ಬದಲಾಗಿ ಶ್ರೀ ಎಂ.ಎಫ್. ಪಾಷ, ಐಪಿಎಲ್ ಐ.ಜಿ.ಪಿ., ತರಬೇತಿ, ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಈ ವಿಚಾರಣೆಯನ್ನು ಎರಡು ತಿಂಗಳ ಒಳಗೆ ಮುಗಿಸಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 2120

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಸಹಕಾರ ಸಚಿವಾಲಯ**

**ಸಂಖ್ಯೆ: ಸಇ 443 ಎಸಸೇ 2007, ಬೆಂಗಳೂರು, ದಿನಾಂಕ 26ನೇ ಡಿಸೆಂಬರ್ 2007**

**ಸೇರ್ಪಡೆ/ತಿದ್ದುಪಡಿ**

ಸರ್ಕಾರದ ಆದೇಶ ಸಂ. ಸಇ 443 ಎಸಸೇ 2007, ದಿನಾಂಕ 21–11–2007ರ ಅಧಿಸೂಚನೆಗೆ ಈ ಕೆಳಕಂಡಂತೆ ಸೇರ್ಪಡೆ:ತಿದ್ದುಪಡಿ ಮಾಡಲಾಗಿದೆ.

ಅ) ಸದರಿ ಆದೇಶದ ಕ್ರ.ಸಂ. 28ರ ನಂತರ ಈ ಕೆಳಕಂಡಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

| ಅಧಿಕಾರಿಯ ಹೆಸರು ಮತ್ತು ಹುದ್ದೆ | ಜನ್ಮ ದಿನಾಂಕ | ವಯೋನಿವೃತ್ತಿ ದಿನಾಂಕ |
|---|---|---|
| ಶ್ರೀ ಸೋಹ್ರಾಬ್ ಅನ್ವರ್, ಸಹಕಾರ ಸಂಘಗಳ ಸಹಾಯಕ ನಿಬಂಧಕರು, (ಕಾಯ್ದೆ ನಿಯಮ ತಿದ್ದುಪಡಿ ಸಲಹಾ ಶಾಖೆ) ಕೇಂದ್ರ ಕಛೇರಿ, ಬೆಂಗಳೂರು | 1–1–1951 | 31–12–2008 |

**ಮತ್ತು**

ಆ) ಅದೇ ಆದೇಶದ ಕ್ರ.ಸಂ. 20ರ ಕಲಂ (3)ರಲ್ಲಿ ನಮೂದಿಸಿರುವ ದಿನಾಂಕ 31–5–1950 ಎಂಬುದನ್ನು ದಿನಾಂಕ 15–3–1950 ಎಂತಲೂ ಹಾಗೂ ಕಲಂ (4)ರಲ್ಲಿ ನಮೂದಿಸಿರುವ ದಿನಾಂಕ 31–5–2008 ಅನ್ನು ದಿ: 31–3–2008 ಎಂದು ತಿದ್ದಿ ಓದಿಕೊಳ್ಳತಕ್ಕದ್ದು ಹಾಗೂ ಈ ರೀತಿ ತಿದ್ದುಪಡಿ ಮಾಡಿರುವುದನ್ನು ಕ್ರ.ಸಂ. (16)ರ ನಂತರ ಸೇರಿಸಿ ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 47

**ಸುರಪುರಕರ್ ವೆಂಕಟೇಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಡಿ.ಹೆಚ್. ಓಸ್ವಾಲ್, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಧೋಳ್ ಇವರ ಜನ್ಮ ದಿನಾಂಕವನ್ನು ಒಪ್ಪಿಕೊಳ್ಳುವ ಬಗ್ಗೆ -ಆದೇಶ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 3–1–2007.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ನಂ. ಡಿಪಿಎನ್/ಕೇಂಸ/ವಿವ/44/2007–08, ದಿನಾಂಕ 14–12–2007.

**ಸರ್ಕಾರದ ಆದೇಶ ಸಂಖ್ಯೆ: ಒಇ 587 ಪಿಪಿಇ 2007, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2007**

ಮೇಲೆ ಓದಲಾದ (1) ಸರ್ಕಾರದ ಅಧಿಸೂಚನೆಯ ಪ್ರಕಾರ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕಗೊಂಡ ಶ್ರೀ ಡಿ.ಹೆಚ್. ಓಸ್ವಾಲ್, ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮುಧೋಳ್ ಇವರ ಜನ್ಮ ದಿನಾಂಕವು ಕರ್ನಾಟಕ ರಾಜ್ಯ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನೀಡಿರುವ ಎಸ್.ಎಸ್.ಎಲ್.ಸಿ. ಮೂಲ ಅಂಕಪಟ್ಟಿಯಲ್ಲಿ 1–3–1973 ಎಂದು ನಮೂದಿಸಿದ್ದು, ಸದರಿ ಅಂಕಪಟ್ಟಿಯನ್ನು ಪರಿಶೀಲಿಸಿದ ನಂತರ ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) ಕಾಯ್ದೆ 1974ರ ಕಲಂ–3ರ ಉಪಕಲಂ–2ರ ಅನ್ವಯ ಶ್ರೀ ಡಿ.ಹೆಚ್. ಓಸ್ವಾಲ್ ಇವರ ಜನ್ಮ ದಿನಾಂಕ 1–3–1973 (ಒಂದನೇ ಮಾರ್ಚ್ ಸಾವಿರದೊಂಬೈನೂರು ಎಪ್ಪತ್ಮೂರು) ಎಂದು ಸರ್ಕಾರವು ಒಪ್ಪಿರುತ್ತದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 46

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು ಮತ್ತು ಕಾಫಿಪೋಸಾ ಮತ್ತು ಅಭಿಯೋಗ)

**FOREST, ECOLOGY AND ENVIRONMENT SECRETARIAT**

**Sub :** Constitution of Tiger Conservation Foundation under Section 38 x of The Wildlife (Protection) Act -1972.

**Read :**
1. Minister of Environment Forests, Govt. of India, New Delhi, Notification dated 22-6-2007.
2. Principal Chief Conservator of Forest (Wildlife), Letter No: C1/CWL/CR-61/2006-2007 dt: 20-8-2007.

**Preamble:**

In notification read at (1) above, Govt. of India issued guidelines for the purpose of regulation of Tiger Conservation Foundation, u/s 38 x of the Wildlife (Protection) Act – 1972. The Principal Chief Conservator of Forest in his letter read at (2) above has sent proposals to Government and has also requested to convene a meeting to discus on the formation of Tiger Conservation Foundations in the State.

In a meeting convened by the Principal Secretary, Forest, Environment & Ecology on 28-11-2007, the above issues were discussed in detail and it was decided to constitute Tiger Conservation Foundations in the State, in accordance with the guidelines issued by Govt. of India.

**Government Order No. FEE 104 FWL 2007, Bangalore, Dated 13th December 2007**

In the exercise of the powers conferred under Section 38 X of the Wildlife (Protection) Act -1972 the Govt. of Karnataka hereby constitutes with immediate effect, the Governing Body and Executive Committee for the Tiger Conservation Foundation for Bandipur Tiger Conservation Reserve, Bhadra Tiger Conservation Reserve and Anshi-Dandeli Tiger Conservation Reserve consisting of following members, namely,

**Governing Body of the Foundation:**

| | | |
|---|---|---|
| 1 | Hon'ble Minister for Forest, Environment & Ecology | President |
| 2 | Principal Secreatary, Forest, Environment & Ecology Department | Vice-President |
| 3 | Principal Chief Conservator of Forest | Member |
| 4 | Field Director of the Tiger Reserve | Member |
| 5 | Deputy Director of the Tiger Reserve | Member |
| 6 | Two prominent scientists or qualified experts in the field (to be nominated by the Government) | Member |
| 7 | Member of Legislative Assembly, Virajpet & Gokak | Members |
| 8 | Representative of the District Panchayat having jurisdiction over the Tiger Reserve Area | Member |
| 9 | Two members of the Executive Committee of the Foundation (other than the Field Directors/ Deputy Directors) | Members |
| 10 | Chief Wildlife Warden | Member-Secretary |

The tenure of the nominated members shal be for the period of three years from the date of nominations.

A member of the Governing Body shall, upon ceasing to be a member of Legislative Assembly or, as the case may be, the District Panchayat, cease to be a member of the Governing Body.

Three Tiger Conservation Foundations in Karnataka are hereby established as under;

1. Bandipur Tiger Conservation Foundation with its office in Bandipur
2. Bhadra Tiger Conservation Foundation with its office in Shimoga
3. Anshi-Dandeli Tiger Conservation Foundation with its office in Dandeli.

An Executive Committee for each of the above Tiger Conservation Foundation is constituted, which shall consist of

| | | |
|---|---|---|
| 1 | Field Director of the concerned Tiger Reserve | Chairperson |
| 2 | Deputy Director or Assistant Director of the concerned Tiger Reserve | Member |
| 3 | Two representatives of Eco-development Committees working in the Tiger Reserves to be nominated by the Governing Body | Members |
| 4 | Two members of the frontline staff of the concerned Tiger Reserve | Members |

The Deputy Director or, as the case may be, the Assistant Director of the Tiger Reserve shall function as the Secretary of the Executive Committee.

The tenure of the nominated members shall be for a period of two years from the date of his nomination.

A member of the Executive Committee, other than nominated members, shall cease to be a member as such, if he ceases to hold offices or post by virtue of which he became the member of the Committee.

The powers and the functions of the Governing Body and the Executive Committee and the procedures and regulations of the Tiger Conservation Foundation is as indicated in the Govt. of India Notification read at (1) above.

By order and in the name of the President of India,

PR. 38

**H.M. MALLIKARJUNA SWAMY**

Under Secretary to Government,

Forest, Ecology and Environment Department.

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ :** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

**ಓದಲಾಗಿದೆ :**

1. ದಿನಾಂಕ 12–4–2007ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.
2. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ 13–6–2007.
3. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ 12–9–07.
4. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2(2)) ದಿನಾಂಕ 19–10–07.
5. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2(3)) ದಿನಾಂಕ 2–11–07.
6. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಡಿಎಸ್‌ಕೆ/ಎಸ್‌ಟಿಟಿ/13/2007–08, ದಿನಾಂಕ 3–12–2007.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (3)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 3,10,09,480/– ರೂಗಳ ಸಾಗಾಣಿಕೆ ಸಹಾಯಧನ ಮತ್ತು 19,43,29,550/– ರೂಗಳ ರೈತರಿಗೆ ಪರಿಹಾರಧನ ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಉಲ್ಲೇಖ (4)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 52,09,436/– ರೂಗಳ ಸಾಗಾಣಿಕೆಯ ಸಹಾಯಧನ ಮತ್ತು 5,56,70.450/– ರೂಗಳು ರೈತರಿಗೆ ಪರಿಹಾರಧನ ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ ಉಲ್ಲೇಖ (5)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಸಕ್ಕರೆ ಕಾರ್ಖಾನೆಗಳು ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಪ್ರತಿ ಟನ್ ಕಬ್ಬಿಗೆ 100 ರೂಗಳ ಸಹಾಯಧನವನ್ನು 22 ಸಕ್ಕರೆ ಕಾರ್ಖಾನೆಗಳಿಗೆ ಅವುಗಳು ಕಬ್ಬು ಸರಬರಾಜು ಮಾಡಿದ ರೈತರಿಗೆ ಬಾಕಿ ಉಳಿಸಿಕೊಂಡಿರುವ ಕಬ್ಬಿನ ಹಣ ಪಾವತಿಸುವ ಸಲುವಾಗಿ 20,38,64.000/– ರೂಗಳ ಸಹಾಯಧನ ಬಿಡುಗಡೆಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (6)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರದಲ್ಲಿ ಬೀಳಗಿ ಶುಗರ್ಸ್ (ಲಿ), ಬೀಳಗಿ, ಬಾಗಲಕೋಟೆ ಜಿಲ್ಲೆ ಈ ಕಾರ್ಖಾನೆಯು ದಿನಾಂಕ 16–4–07ರಿಂದ ದಿನಾಂಕ 31–5–07 ರವರೆಗೆ 75,287 ಟನ್ ಕಬ್ಬು ನುರಿಸಿದ್ದು, ಪ್ರತಿ ಟನ್‌ಗೆ 100 ರೂ ಸಹಾಯ ಧನದಂತೆ 75.28 ಲಕ್ಷ ರೂಗಳ ಸಹಾಯಧನಕ್ಕೆ ಅರ್ಹವಿದ್ದು, ಜಿಲ್ಲಾಧಿಕಾರಿ ಬಾಗಲಕೋಟೆ ರವರು ಕಾರ್ಖಾನೆಗೆ 75.28 ಲಕ್ಷ ರೂಗಳ ಸಹಾಯಧನದ ಬಿಡುಗಡೆಗೆ ಶಿಫಾರಸ್ಸು ಮಾಡಿದ್ದು, ಕಾರ್ಖಾನೆಯು ದಿನಾಂಕ 30–11–07ರ ಅಂತ್ಯಕ್ಕೆ ರೈತರಿಗೆ ಕಬ್ಬು ಖರೀದಿ ಬಾಕಿ 85.21 ಲಕ್ಷ ರೂಗಳನ್ನು ಬಾಕಿ ಉಳಿಸಿಕೊಂಡಿದ್ದು, ಸದರಿ ಬಾಕಿ ಪಾವತಿಸಲು ಅನುಕೂಲವಾಗಲು ಕಾರ್ಖಾನೆಗೆ ನೀಡಬೇಕಾದ ಪ್ರತಿ ಟನ್‌ಗೆ 100 ರೂ ಸಹಾಯಧನ ಬಾಬ್ತು 75.28 ಲಕ್ಷ ರೂಗಳನ್ನು ಬಿಡುಗಡೆ ಮಾಡಲು ಆಯುಕ್ತರು ಕಬ್ಬು ಅಭಿವೃದ್ಧಿ ರವರು ಶಿಫಾರಸ್ಸು ಮಾಡಿರುತ್ತಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 2007 (ಭಾ–2)(4), ಬೆಂಗಳೂರು, ದಿನಾಂಕ: 1ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಯನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಬೀಳಗಿ ಸಕ್ಕರೆ ಕಾರ್ಖಾನೆ (ನಿ), ಬೀಳಗಿ, ಬಾಗಲಕೋಟೆ ಜಿಲ್ಲೆ, ಈ ಕಾರ್ಖಾನೆಯು ದಿನಾಂಕ 16–4–07 ರಿಂದ ದಿನಾಂಕ 31–5–07 ರವರೆಗಿನ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ 75.287 ಟನ್ ಕಬ್ಬಿಗೆ ಪ್ರತಿ ಟನ್‌ಗೆ

ನೀಡುವ 100/– ರೂಗಳ ಸಹಾಯಧನ ಮೊತ್ತ 75.28 ಲಕ್ಷ ರೂಗಳನ್ನು (ರೂ. ಎಪ್ಪತ್ತೈದು ಲಕ್ಷ ಇಪ್ಪತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ಕಾರ್ಖಾನೆಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ದಿನಾಂಕ 30–11–07ರದ ಅಂತ್ಯಕ್ಕೆ ಬಾಕಿ ಉಳಿಸಿಕೊಂಡಿರುವ ಕಬ್ಬಿನ ಹಣವನ್ನು ನೀಡುವ ಸಲುವಾಗಿ ಜಿಲ್ಲಾಧಿಕಾರಿ ಬಾಗಲಕೋಟೆ ರವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2007–08ನೇ ಸಾಲಿನ ಆಯವ್ಯಯದಲ್ಲಿ ಯಾವುದೇ ಹಣವನ್ನು ಈ ಕಾರ್ಯಕ್ರಮಗಳಿಗೆ ನಿಗಧಿಪಡಿಸಿಲ್ಲದ ಕಾರಣ ಈ ಹಣವನ್ನು 2007–08ನೇ ಸಾಲಿನ ಪೂರಕ ಅನುದಾನ (ಮೊದಲನೇ ಕಂತು)ದಲ್ಲಿ 50 ಕೋಟಿ ರೂಗಳನ್ನು ಒದಗಿಸಲಾಗಿದ್ದು, ಲೆಕ್ಕಶೀರ್ಷಿಕೆ 2852–08–201–0–07 (ಯೋಜನೆ) ಕಬ್ಬು ಬೆಳೆಗಾರ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ವಿಶೇಷ ನೆರವು 106 ಸಹಾಯಧನ ಅಡಿಯಲ್ಲಿ ಬಿಡುಗಡೆಗೆ ಮಂಜೂರು ಮಾಡಲಾಗಿದೆ. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಈ ಹಣವನ್ನು ಸರ್ಕಾರದ ಆದೇಶ ದಿನಾಂಕ 13–6–07ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ, ಜಿಲ್ಲಾಧಿಕಾರಿ, ಬಾಗಲಕೋಟೆ ರವರ ಮೂಲಕ ಕಬ್ಬು ಸರಬರಾಜು ಮಾಡಿದ ರೈತರಿಗೆ ಆದ್ಯತೆ ಮೇರೆಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದ್ದು.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಮತ್ತು ಜಿಲ್ಲಾಧಿಕಾರಿ ಬಾಗಲಕೋಟೆ ರವರು ಬಿಡುಗಡೆಯಾದ ಹಣವನ್ನು ಬೀಳಗಿ ಸಕ್ಕರೆ ಕಾರ್ಖಾನೆ (ನಿ), ಬೀಳಗಿ ಬಾಗಲಕೋಟೆ ಜಿಲ್ಲೆ, ಈ ಕಾರ್ಖಾನೆಗೆ ಕಬ್ಬು ಸರಬರಾಜು ಮಾಡಿದ ರೈತರಿಗೆ ವಿತರಿಸಲು ಕ್ರಮವಹಿಸತಕ್ಕದ್ದು. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿ ರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಎಫ್‌ಡಿ 988 ವೆಚ್ಚ–1/2007 ದಿನಾಂಕ 18/21–8–07ರಂದು ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 45

**ಪಿ. ಆನಂದ್ ಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## HORTICULTURE SECRETARIAT

**Sub :** "Centrally Sponsored Scheme on Micro Irrigation" Release of State share during 2007-08 –reg.

**Read :**
1. G.O. No. AHD 125 HPP 2007, dated 26-7-2007
2. GOI Letter F No. 20-4/2007-Hort. Dated 19-7-2007
3. GOI Letter F No. 20-4/2007-Hort. Dated 26-9-2007
4. GOI Letter F No. 20-4/2007-Hort. Dated 13-11-2007
5. Letter of Director of Horticulture No. ToE/ToJmNi/Hani/ SaToA/2007-08/1514 Dated 21-11-2007.
6. G.O. No. FD 270 BRS 2007 Dated 12-12-2007.

**Preamble:**

Approval for the implementation of "Drip Irrigation –Special subsidy for horticulture crops", Head of Account 2401-00-108-2-30, as a District sector scheme during the year 2007-08 had been accorded vide Government Order read at (1) above. The total Outlay for the schemes has been Rs. 7765.37 lakh. Out of this, Rs. 4068.02 lakh is the Central share and Rs. 3697.35 lakh is the State share.

Government of India has released Central Share of Rs. 1233.82 lakh, Rs. 150.55 lakh and Rs. 967.58 lakh directly in favour of the Implementing Agency i.e., Deputy Director of Horticulture Zilla Panchayath under the scheme "Centrally Sponsored Scheme on Micro Irrigation" vide letters read at (2), (3) and (4) above, respectively. Thus, a total sum of Rs. 2351.95 lakh has been released as Central share.

The Director of Horticulcure has requested to release the matching State share vide letter read at (6) above.

An amount of Rs. 1358.25 lakh has been provided under District sector scheme namely, "Drip Irrigation – Special subsidy for horticulture crops", Head of Account 2401-00-108-2-30 during 2007-08. Finance department has agreed to release the balance amount of Rs. 608.25 lakh under the Head of

Account 2401-00-108-2-30-71 (Plan) under District sector and Rs. 650 lakh available under Head of Account 2401-00-108-2-30 (Plan) under State sector. Finance Department has accorded sanction for release of an additional grant of Rs. 308.75 lakh under the Head of Account 2401-00-108-2-30-59 (Plan) to meet the State share for the Centrall Sponsored Scheme of Micro Irrigation vide G.O. read at (6) above.

Hence this Order:

**Government Order No. AHD 125 HPP 2007, Bangalore, Dated 28th December 2007**

Government is pleased to release to the Director of Horticulture a total sum of Rs. 1567.00 lakh (Rupees Fifteen Crores and Sixty Seven lakhs Only) towards the State share for "Centrally Sponsored Scheme on Micro Irrigation" during the year 2007-08. This includes Rs. 650.00 lakh available under Head of Account 2401-00-108-2-30 (Plan) under State sector, balance amount of Rs. 608.25 lakh under the Head of Account 2401-00-108-2-30-71 (Plan) under District sector and additional grant of Rs. 308.75 lakh under the Head of Account 2401-00-108-2-30-59 (Plan) under State sector.

This release of State share is subject to the extent of matching Central share already released by the Government of India.

This Order issues with the concurrence of Finance Department vide note No. FD 411 Exp 4/07 dated 14-12-2007.

By order and in the name of the President of India,

PR. 41

**S. RAJU**

Under Secretary to Government,

Horticulture Department.

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ವಿಷಯ :** ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ರೆಪ್ರೆಸೆಂಟೇಟಿವ್ ಡೆಮಾಕ್ರಸಿ (CIREDE), ಬೆಂಗಳೂರು ಇವರ ಸಹಯೋಗದೊಂದಿಗೆ ಸಂಸದೀಯ ವ್ಯವಹಾರ ಕುರಿತು ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಖಾಯಂ ಆಗಿ ಮಾನ್ಯತೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ರೆಪ್ರೆಸೆಂಟೇಟಿವ್ ಡೆಮಾಕ್ರಸಿ (CIREDE), ಬೆಂಗಳೂರು –ಇವರ ಪತ್ರ ಸಂಖ್ಯೆ 2872/06, ದಿ: 18–8–06.
2. CIREDE ಪತ್ರ ಸಂಖ್ಯೆ 1914/07, ದಿನಾಂಕ 25–6–2007.

**ಪ್ರಸ್ತಾವನೆ :**

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ರೆಪ್ರೆಸೆಂಟೇಟಿವ್ ಡೆಮಾಕ್ರಸಿ ಸಂಸ್ಥೆಯು ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ಸಂಸದೀಯ ವ್ಯವಹಾರಗಳ ಶಿಕ್ಷಣದ ಬಗ್ಗೆ ಶಿಬಿರಗಳನ್ನು ನಡೆಸುತ್ತಿದ್ದು, ಅಂತಹ ಶಿಬಿರಗಳನ್ನು ನಡೆಸಲು ಸರ್ಕಾರದ ಮಾನ್ಯತೆ ನೀಡಲು ಕೋರಿದ್ದಾರೆ.

ಮೇಲೆ ಓದಲಾಗಿರುವ ಕ್ರಮ ಸಂಖ್ಯೆ (2)ರ ಪತ್ರದಲ್ಲಿ CIREDE ಸಂಸ್ಥೆಯು ಸರ್ಕಾರವು ಕೋರಿದ್ದ ಎಲ್ಲಾ ಮಾಹಿತಿ ಹಾಗೂ ಸ್ಪಷ್ಟೀಕರಣವನ್ನು ದಾಖಲೆಗಳೊಂದಿಗೆ ಒದಗಿಸಿದೆ.

ಈ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 21 ಸಂವ್ಯವಿ 2006 (ಭಾ), ಬೆಂಗಳೂರು, ದಿನಾಂಕ: 21ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಈ ಮುಂದಿನ ಷರತ್ತುಗೊಳಪಟ್ಟು ಸೆಂಟ್ರಲ್ ಇನ್‌ಸ್ಟಿಟ್ಯೂಟ್ ಆಫ್ ರೆಪ್ರೆಸೆಂಟೇಟಿವ್ ಡೆಮಾಕ್ರಸಿ ಸಂಸ್ಥೆಯು ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ಸಂಸದೀಯ ವ್ಯವಹಾರಗಳ ಶಿಕ್ಷಣದ ಬಗ್ಗೆ ಶಿಬಿರಗಳನ್ನು ನಡೆಸಲು ಸರ್ಕಾರವು ತಾತ್ವಿಕವಾಗಿ ಮಾನ್ಯತೆ ನೀಡಿದೆ. ಸದರಿ ಸಂಸ್ಥೆಯು ಈ ಬಗ್ಗೆ ಸರ್ಕಾರದಿಂದ ಯಾವುದೇ ಅನುದಾನ ಪಡೆಯಲು/ ಕೋರಲು ಅನುಮೋದನೆ ನೀಡಲು ಸಾಧ್ಯವಿಲ್ಲ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 173

**ಜಿ. ಶ್ರೀಧರ್**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ